

ಒಂದಪರಾಧವೆಂದು ವಂದಿಸಲೇನಯ್ಯ
ಒಂದರ ಚಿಂತೆಯೆಂದು ಪೊಂದಿಸಲೇನಯ್ಯ
ಒಂದರ ಭಯವೆಂದು ದೇಡಿಕೊಳ್ಳಲೇನಯ್ಯ
ಒಂದರ ಹರುಷವೆಂದು ಒಪ್ಪಿಕೊಳ್ಳಲೇನಯ್ಯ
ಒಂದರ ಕ್ಲೇಶವೆಂದು ಒದಗಿ ನುಂಗಲೇನಯ್ಯ
ಒಂದಲ್ಲ ಎರಡಲ್ಲ ವಿವರಿಸಿ ಹೇಳಲಿನ್ನು
ಒಂದಪರಾಧವೆ ಇವಕೆ ಕಾರಣ ಮೂಲ
ಇಂದಿರೆಯರಸ ಗೋಪಾಲ ವಿಠಲ ಕೃಷ್ಣ
ತಂದೆ ನಿಮ್ಮ ವಿಸ್ಮೃತಿ ಎನಗೆ ಮುಖ್ಯಾಪರಾಧ

-ಶ್ರೀ ಗೋಪಾಲದಾಸರು







# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ (ವೈಕುಂಠ) ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.
* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ.
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ, ಭಕ್ತಿ ಸಂಗೀತ.
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭-ನೇ ಮೈಲಿಯ ಬಳಿ ವೈದ್ಯಸೌಲಭ್ಯ ಉಪಹಾರ ಸೌಲಭ್ಯ ಕ್ಯಾಂಟೀನ್.
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ.
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.
* ಯಾತ್ರಿಕರನ್ನು ಪಂಡಾಗಳು, ವಂಚಕರಿಂದ ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಂದು ಅಧಿಕಾರಿ ಮತ್ತು ಸಿಬ್ಬಂದಿ.

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.**

ಗಮನಿಕೆ: ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮--೩೦ ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦-೩೦ ರಿಂದ ೧--೦೦ ಗಂಟೆಯವರೆಗೆ ಕೆಲಸಮಾಡುತ್ತದೆ.



ಸಂಪುಟ -- 26 ಜನವರಿ 1996 ಸಂಚಿಕೆ --8

# ವಿಷಯಸೂಚಿ



ಮುಖ ಚಿತ್ರ: ದಶಾವತಾರಿ ಶ್ರೀ ವೆಂಕಟೇಶ್ವರಸ್ವಾಮಿ.

ಹಿಂಬದಿಯಲ್ಲಿ: ಸ್ವಾಮಿ ಅಯ್ಯಪ್ಪ - ಚಿತ್ರಗಳು ಡಾ|| ಜಗದೀಶ್.

ಒಳಗಡೆ: 1) ಕಪಿಲತೀರ್ಥದಲ್ಲಿ ತೆಪ್ಪೋತ್ಸವ.

2) ಶ್ರೀ ಗೋವಿಂದರಾಜಸ್ವಾಮಿ ಆಲಯದಲ್ಲಿ ರಥಸಪ್ತಮಿ.


ಗೌರವ ಸಂಪಾದಕರು:

ಎನ್. ರಮೇಶ್‌ಕುಮಾರ್ ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ,

ತಿ.ತಿ.ದೇ. ತಿರುಪತಿ.

ಸಂಪಾದಕ:

ಎಸ್.ಎಸ್. ರಾಮಮೂರ್ತಿ, ಎಂ.ಎ.

ಉಪಸಂಪಾದಕ:

ಬಿ. ಎನ್. ಶ್ರೀನಿವಾಸನ್ ಎಂ.ಎ.,

ಮುದ್ರಣ:

ಪಿ. ಮೋಹನ್ ರಾವ್

ಲೇಖನ/ಜಾಹೀರಾತುಗಳಿಗೆ

ಮಿಕ್ಕವಿವರಗಳಿಗೆ

ಸಂಪಾದಕರು,

ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೨--೦೦**

**ವಾರ್ಷಿಕ ಚಂದಾ ೨೪--೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. --ಸಂ|||

# ತಿರುಮಲ ತಿರುಪತಿ ದೇವಸ್ಥಾನಗಳು

## ತಿರುಪತಿ

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

**ಎಸ್. ರಮೇಶ್‌ಕುಮಾರ್, ಐ.ಎ.ಎಸ್.,**
ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೇ;

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ.

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ. ತಾವು ರೂ. 1000/- ಅಥವಾ ಗುಣಕಗಳಲ್ಲಿ ದಾನ ಮಾಡಿದರೂ ಸಾಕು; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನಯೋಜನೆಯನ್ನು ತಿ.ತಿ.ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ.

ಅನ್ನೇಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿಃ
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿಃ
--ಬೋಧಾಯನ ಧರ್ಮಸೂತ್ರ.

ಒಳಶಕ್ತಿಯ ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು.

ವಂದನೆಗಳೊಡನೆ ತಮ್ಮ ವಿಶ್ವಾಸಿ,
**ಎಸ್. ರಮೇಶ್‌ಕುಮಾರ್**

ಸಂಭ್ರಮದಿಂದ ನೆಂಟರಿಷ್ಟರ ಮನೆಗೆ ಹೋಗಿ ಎಳ್ಳು ಬೀರಿ ಬರುತ್ತಾರೆ. ಈ ಹಬ್ಬ ಹೆಂಗಸರು ಮಕ್ಕಳಿಗೆ ಅಧಿಕ ಸಂತಸ ನೀಡುತ್ತದೆ. ಅವರ ಸಂಭ್ರಮ ಹೇಳತೀರದು. ವಿಧವಿಧವಾದ ಬಣ್ಣ ಬಣ್ಣದ, ವಿವಿಧ ಆಕಾರಗಳ ಸಕ್ಕರೆ ಅಚ್ಚುಗಳ ತಯಾರಿಯ ಸಡಗರ ಹಬ್ಬದ ಒಂದುವಾರದ ಮೊದಲೇ ಆರಂಭವಾಗುತ್ತದೆ. ಈ ಸಕ್ಕರೆ ಅಚ್ಚುಗಳನ್ನು ಎಳ್ಳಿನೊಡನೆ ಹಂಚುತ್ತಾರೆ. ಈ ಎಳ್ಳಿನೊಡನೆ ಕಡಲೆ, ಕಡಲೇಬೀಜ, ಕೊಬ್ಬರಿಚೂರು, ಬೆಲ್ಲದ ಚೂರುಗಳನ್ನು ಬೆರೆಸುತ್ತಾರೆ. ಅದರೊಡನೆ ಕಬ್ಬು, ಹಣ್ಣು, ತಾಂಬೂಲವಿರಿಸಿಕೊಡುತ್ತಾರೆ. ಸ್ನೇಹದ ಬಂಧುತ್ವದ ಬಂಧನವನ್ನು ಎಳ್ಳು ಸೂಚಿಸಿದರೆ, ಬೆಲ್ಲ "ನಿಮ್ಮ ಜೀವನ ಸಿಹಿಯಾಗಲಿ" ಎಂಬ ಸಂದೇಶವನ್ನು ನೀಡುತ್ತದೆ. ಈ ಹಬ್ಬದಂದು ಹೆಂಗಸರು, ಮಕ್ಕಳು ಮನೆಮನೆಗೆ ಪರಸ್ಪರ ಎಳ್ಳು ಬೆಲ್ಲ ಹಂಚುವುದನ್ನು ವೀಕ್ಷಿಸುವುದೇ ಕಣ್ಣಿಗೆ ಹಬ್ಬ.

ಸಂಕ್ರಾಂತಿಯ ದಿನದಂದು ಗೋಪೂಜೆ ಕೆಲವೆಡೆ ನಡೆಸುವ ಸಂಪ್ರದಾಯವಿದೆ. ಅವುಗಳ ಮೈತೊಳೆದು, ಕೊಂಬುಗಳಿಗೆ ಬಣ್ಣಬಳಿದು, ಅಲಂಕರಿಸುತ್ತಾರೆ. ಅವುಗಳನ್ನು ಪೂಜಿಸಿದ ನಂತರ ಹುಗ್ಗಿ ತಿನ್ನಿಸಿ ಮೆರವಣಿಗೆಯಲ್ಲಿ ಕೊಂಡೊಯ್ಯುವುದನ್ನು ಗ್ರಾಮ ಗ್ರಾಮಗಳಲ್ಲಿ ನಡೆಸುತ್ತಾರೆ. ಜಾನುವಾರುಗಳ ಜೀವನದ ಮೇಲೆ, ತಮ್ಮ ತಮ್ಮ ಜೀವನವನ್ನು ಜೋಡಿಸುವರೈತಾಪಿ ಜನ. ಗೋ - ಸಂಪತ್ತನ್ನು ಗಾಢವಾಗಿ ಪ್ರೀತಿಸುವ ಸಂಕೇತವೇ ಈ ಆಚರಣೆ.

'ಸಂಕ್ರಾಂತಿ'ಗೆ ಸಂಕ್ರಾಂತಿ ದೇವತೆಯ ಕಲ್ಪನೆ ಇದೆ. ಇದಕ್ಕೆ ನಾಲ್ಕು ತಲೆಗಳು, ಎಂಟು ತೋಳುಗಳಿದ್ದು, ಇದು ಯಾವ ದಿಕ್ಕಿಗೆ ಹೋಗುತ್ತದೋ ಆ ದಿಕ್ಕಿನವರಿಗೆ ಸಂಕಟವೆಂಬ ನಂಬಿಕೆ ಇದೆ. ಸಂಕ್ರಾಂತಿ ಯವಾರ, ತಿಥಿನಕ್ಷತ್ರಗಳನ್ನು ಅನುಸರಿಸಿ ಸಂಕ್ರಾಂತಿ ಫಲವನ್ನು ಹೇಳುವ ಸಂಪ್ರದಾಯವಿದೆ. ✪

# ಭಗವಾನ್ ಸೂರ್ಯನಾರಾಯಣ

---ಕಂದಾಡೈ ಕೇಶವನ್.

ಮಹಾಭಾರತದ ಆದಿಪರ್ವದಲ್ಲಿ ಕಶ್ಯಪ ಮುನಿಗೆ ಅದಿತಿಯ ಗರ್ಭದಲ್ಲಿ ಸೂರ್ಯನು ಜನಿಸಿದನೆಂದು ಹೇಳಲ್ಪಟ್ಟಿದೆ. ಸುರಾಸುರರ ವಂಶಾವಳಿಯನ್ನು ತಿಳಿಸುವಾಗ ಅವರ ಉತ್ಪತ್ತಿಯ ರಹಸ್ಯವನ್ನು ತಿಳಿಸುತ್ತಾ ಅವರ ಚರಿತ್ರೆಯನ್ನು ಕೇಳುವುದೂ ಹಾಗೂ ಹೇಳುವುದು ಬಹು ಪುಣ್ಯಪ್ರದವೆಂದು ತಿಳಿಸುತ್ತಾ--

ಆಯುಷ್ಯಶ್ಚೈವ ಪುಣ್ಯಶ್ಚ ಧನ್ಯಃ<br>
ಶ್ರುತಿ ಸುಖಾವಹಃ<br>
ಶ್ರೋತವ್ಯಶ್ಚೈವ ಸತತಂ<br>
ಶ್ರಾವ್ಯಶ್ಚೈವ ಅನಸೂಯತಾ

ಇವರ ಚರಿತೆ ಆಯುರ್ವರ್ಧಕವಾದುದು. ಪುಣ್ಯಪ್ರದ ಶ್ಲಾಘನೀಯವಾದುದು. ಕಿವಿಗೆ ಕೇಳಲು ಇಂಪು. ಸದಾ ಆ ದ್ವಾದಶಾದಿತ್ಯರ ಪ್ರಸಂಗವನ್ನು ಅಸೂಯಾರಹಿತನಾಗಿ ಕೇಳುವುದು, ಇನ್ನೊಬ್ಬರಿಗೆ ತಿಳಿಸುವುದು ಶ್ರೇಯಸ್ಕರವೆಂದು ವ್ಯಾಸರು ತಿಳಿಸುತ್ತಾರೆ. ಕಶ್ಯಪನ ಮಕ್ಕಳಾದ ದ್ವಾದಶಾದಿತ್ಯರಲ್ಲಿ ಹತ್ತನೆಯವನಾದ ಸೂರ್ಯನು (ಸವಿತೃ) ಜಗತ್ತಿಗೆ ಹಿತಕಾರಣ. ಸವಿತೃ ತ್ವಷ್ಟೃವಿನ ಮಗಳಾದ ಸಂಜ್ಞಾದೇವಿಯನ್ನು ಮದುವೆಯಾಗಿ ಯಮ, ಮನು, ಯಮುನೆಯೆಂಬ ಮೂವರು ಮಕ್ಕಳನ್ನು ಪಡೆದನು. ಸಂಜ್ಞಾದೇವಿಯ ಪ್ರತಿಬಿಂಬವಾದ ಛಾಯೆಯಲ್ಲಿ ಸಾವರ್ಣಿ, ಶನೈಶ್ವರ ಎಂಬುವ ಮಕ್ಕಳನ್ನು ಪಡೆದ. ಸಂಜ್ಞಾ ಸೂರ್ಯನ ಪ್ರಚಂಡ ತೇಜಸ್ಸನ್ನು ಸಹಿಸಲಾರದೆ ತನ್ನ ಮೈಯ್ಯಿಂದ ತನ್ನನ್ನೇ ಹೋಲುವ ಛಾಯೆ ಎಂಬ ಹೆಂಗಸನ್ನು ಸೃಷ್ಟಿಸಿ ಸೂರ್ಯನೊಡನೆ ಇರಲು ಹೇಳಿ ಅಜ್ಞಾತವಾಸಕ್ಕೆ ಹೊರಟುಹೋದಳು. ಈಕೆಯಲ್ಲಿ ಹುಟ್ಟಿದ ಮಕ್ಕಳೇ ಶನಿ, ತಪತಿ, ವಿಷ್ಟಿ ಹಾಗೂ ಮನು. ಛಾಯೆಯನ್ನು ಸೃಷ್ಟಿಸಿ ಸಂಜ್ಞಾದೇವಿ ಕುದುರೆರೂಪದಿಂದ ಆಕಾಶದಲ್ಲಿ ಸಂಚರಿಸುತ್ತಿದ್ದಾಗ ಈ ವಿಷಯವನ್ನು ಅರಿತ ಸೂರ್ಯನು ಅಶ್ವರೂಪತಾಳಿ ಸಂಜ್ಞೆಯನ್ನು ಕೂಡಿದಾಗ ಅಶ್ವಿನೀದೇವತೆಗಳು ಜನಿಸಿದರು. ಹೀಗೆ ಸೂರ್ಯನ ಪ್ರಸಂಗ, ಪ್ರಶಂಸೆಗಳು ಭಾರತ, ಭಾಗವತ, ಹರಿವಂಶ, ವಿಷ್ಣುಪುರಾಣ, ವಾಯುಪುರಾಣ, ಪದ್ಮಪುರಾಣ, ಮತ್ಸ್ಯಪುರಾಣ, ಭವಿಷ್ಯಪುರಾಣ, ಋಗ್ವೇದ ಮುಂತಾದ ಪುಣ್ಯಗ್ರಂಥಗಳಲ್ಲಿ ಕೊಂಡಾಡಲ್ಪಟ್ಟಿವೆ.

## ಮಹಾಭಾರತದಲ್ಲಿ ಸೂರ್ಯ

ಶ್ರೀಕೃಷ್ಣನ ಸೋದರತ್ತೆಯಾದ ಕುಂತೀ ಕನ್ಯಾವಸ್ಥೆಯಲ್ಲಿ ಇದ್ದಾಗ ಕುಂತೀಭೋಜನ ಆಸ್ಥಾನಕ್ಕೆ ದುರ್ವಾಸ-ಮುನಿ ಬಂದನು. ಆ ಋಷಿಯ ಅತಿಥಿಸತ್ಕಾರಕ್ಕೆ ಕುಂತಿಯು ನಿಂತಳು, ಆಕೆಯ ಸತ್ಕಾರದಿಂದ ತುಷಿತನಾದ ಮುನಿ ಆಕೆಗೆ ಮಹಾಮಂತ್ರವನ್ನು ಉಪದೇಶಮಾಡಿದ. ಆ ಮಂತ್ರವನ್ನು ಪುನಶ್ಚರಣಮಾಡಿ ಯಾವ ದೇವತೆಯನ್ನಾದರೂ ಆಹ್ವಾನಿಸಿ ಆ ದೇವತೆಯ ಅಂಶದಿಂದ ಮಕ್ಕಳನ್ನು ಪಡೆಯಬಹುದೆಂದು ತಿಳಿಸಿದ.

ಚಪಲಚಿತ್ತಳಾದ ಕುಂತಿ ಕನ್ಯಾವಸ್ಥೆಯಲ್ಲಿದ್ದರೂ ಮುನಿಯ ಮಂತ್ರಮಹಿಮೆಯನ್ನು ಪರೀಕ್ಷಿಸಲು ಉದಯಿಸುತ್ತಲಿದ್ದ ಸೂರ್ಯನನ್ನು ಕುರಿತು ಧ್ಯಾನಿಸಿ ಮಹಾಮಂತ್ರವನ್ನು ಪುನಶ್ಚರಣೆ ಮಾಡಿದಳು. ಸೂರ್ಯನು ಮಂತ್ರಪ್ರಭಾವದಿಂದ ಆಕೆಯ ಸಮಾಗಮವನ್ನು ಪಡೆದ. ಕುಂತಿಗೆ ಗರ್ಭನಿಂತು ಸಾಕ್ಷಾತ್ ಸೂರ್ಯನನ್ನೇ ಹೋಲುವ ಕರ್ಣಕುಂಡಲಗಳನ್ನೂ ಕವಚವನ್ನೂ ಧರಿಸಿದ ಕರ್ಣನು ಜನಿಸಿ ಲೋಕ ವಿಖ್ಯಾತನಾದನು. ಕನ್ಯಾವಸ್ಥೆಯಲ್ಲಿದ್ದರೂ ಸೂರ್ಯನ ಪ್ರಭಾವದಿಂದ ಕುಂತಿಯ ಕನ್ಯೆತನ ಕೆಡಲಿಲ್ಲ. ಸೂರ್ಯನ ಮಗ ತನ್ನ ದಾನದ ನಿಯಮವನ್ನು ಬಿಡದೆ, ಬ್ರಾಹ್ಮಣ ವೇಷದಲ್ಲಿ ಬಂದ ಇಂದ್ರನಿಗೆ ತನ್ನ ಪ್ರಾಣಕವಚವನ್ನೇ ದಾನಮಾಡಿ ದಾನಶೂರನೆಂಬ ಕೀರ್ತಿ ಪಡೆದ ಮಹಾನುಭಾವನಾದ.

ಮೇರುಪರ್ವತದ ಮೇಲೆ ಸಮಾಲೋಚನೆ ಮಾಡುತ್ತಿದ್ದ ದೇವತೆಗಳಿಗೆ ಸಮುದ್ರಮಥನವನ್ನು ಶ್ರೀಮನ್ನಾರಾಯಣನು ತಿಳಿಸಲು ಮಂದರಪರ್ವತವನ್ನು ಸಮುದ್ರಮಥನಕ್ಕೆ ಉಪಯೋಗಿಸಿ ಅಮೃತ ಕಳಶವನ್ನು ಪಡೆದಾಗ ಶ್ರೀವಿಷ್ಣು ಮೋಹಿನೀ ರೂಪತಾಳಿ ದೇವತೆಗಳಿಗೆ ಅಮೃತಪಾನ ಮಾಡಿಸುತ್ತಿರಲು, ರಾಹುವೆಂಬ ದಾನವನು ದೇವತೆಗಳ ರೂಪತಾಳಿ ಅಮೃತಪಾನ ಮಾಡುತ್ತಿರುವ ವಿಷಯವನ್ನು ಚಂದ್ರ ಸೂರ್ಯರು (ಜಗತ್ತಿನ ಕಣ್ಣುಗಳು) ಗಮನಿಸಿ ದೇವತೆಗಳ ಹಿತಕ್ಕಾಗಿ ಈ ವಿಷಯವನ್ನು ವಿಷ್ಣುವಿಗೆ ತಿಳಿಸಲು ವಿಷ್ಣುವು ತಕ್ಷಣವೇ ತನ್ನ ಚಕ್ರದಿಂದ ದಾನವನ ಮಸ್ತಕವನ್ನು ಕತ್ತರಿಸಿದನು. ಅಮೃತ ಪ್ರಭಾವದಿಂದ ಮೊಂಡಮುಂಡವು ಜೀವಂತವಾಗಿಯೇ ಉಳಿಯಿತು. ರಾಹುವು ಚಂದ್ರ ಸೂರ್ಯರು ತನ್ನ ಗುಟ್ಟನ್ನು ಬಯಲಿಗೆ ತಂದಿದ್ದ ಸಿಟ್ಟಿನಿಂದ ಅವರ ಬದ್ಧದ್ವೇಷಿಯಾಗಿ ಗ್ರಹಣಕಾಲದಲ್ಲಿ ಅವರನ್ನು ನುಂಗಲು ಪ್ರಯತ್ನಮಾಡುತ್ತಲೇ ಇದ್ದಾನೆ. ಆದರೂ ಸೂರ್ಯನು ಲೋಕದ ಹಿತಕಾರ್ಯ ಪರಮಾತ್ಮಸ್ವರೂಪನು. ಒಮ್ಮೆ ರಾಹುವು ಸೂರ್ಯನನ್ನು ನುಂಗುತ್ತಿರಲು ಅವನ ಕಾಟವು ತಪ್ಪದೆ ನಡೆಯುತ್ತಿದ್ದರಿಂದ ದೇವತೆಗಳು ತನ್ನ ಬಗ್ಗೆ ಏನೂ ಕಾಳಜಿ ತೋರದೆ ಇವುದನ್ನು ಕಂಡು ಕೋಪಗೊಂಡು ಸೂರ್ಯನು ಅಸ್ತಾಚಲಕ್ಕೆ ಹೊರಟುಹೋದನು. ಸೂರ್ಯನು ಉದಯಿಸದೆ ಲೋಕವೆಲ್ಲಾ ಅತಿಯಾದ ಬೇಗೆಯಿಂದ ಬೆಂದು ಪ್ರಪಂಚವೆಲ್ಲಾ ಹಾಹಾಕಾರದಿಂದ ತುಂಬಿತು. ಸೂರ್ಯನ ಪ್ರಭಾವದಿಂದ ತ್ರಿಭುವನಗಳು ಭಸ್ಮೀಭೂತವಾಗುವ ಸಮಯ ಬರುತ್ತಿರಲು ಬ್ರಹ್ಮನು ಮಹಾಕಾಯನೂ, ಮಹಾತೇಜಸ್ವಿಯಾದ ಅರುಣನನ್ನು ಸೂರ್ಯನ ತಾಪವನ್ನು ತಡೆಯಲು ಇನ್ನು ಮುಂದೆ ಇಂತಹ ಅಕೃತ್ಯವು ನಡೆಯದಿರಲು ಅರುಣನನ್ನು ಸೂರ್ಯನ ಸಾರಥಿಯಾಗಿ ನಿಯಮಿಸಿದನು. ವನವಾಸಕಾಲದಲ್ಲಿ ಆಹಾರಕ್ಕಾಗಿ ಪರಿತಪಿಸದಿರಲು ಯುಧಿಷ್ಠಿರನು ಸೂರ್ಯನನ್ನು ಸ್ತುತಿಸಲು ಸೂರ್ಯನು ಅಕ್ಷಯ ಪಾತ್ರೆಯನ್ನು ನೀಡಿ ಅನುಗ್ರಹಿಸಿದ.

ಪಾಂಡವರು ವನವಾಸಕ್ಕೆ ಹೊರಟಾಗ ಅನೇಕ ವೇದ ವೇದಾಂಗ ಪಾರಂಗತರಾದ ಬ್ರಾಹ್ಮಣರು ಅವರ ಹಿಂದೆಯೇ ಹೊರಟರು. ತಮ್ಮ ಜೊತೆ

ಜೀವ ಶಕ್ತಿಗೆ ಮೂಲ ಸೂರ್ಯ. ಅವನಿದ್ದರೆ ಮಳೆ, ಬೆಳೆ, ಗಾಳಿ, ಮತ್ತೆಲ್ಲ. ಅವನಿಲ್ಲದೆ ಬದುಕೂ ಇರದು ಎಂಬ ವೈಜ್ಞಾನಿಕತೆಯೊಂದೆಡೆ ಇದ್ದೇ ಇದೆ. ಅದರ ಸೂಕ್ಷ್ಮ ಒಳಗನ್ನು ತಿಳಿಯಲು ಆರ್ಷೇಯ ಜಿಜ್ಞಾಸೆ ಅಂದಿನಿಂದಲೂ ನಡೆದೇ ಇದೆ. ಎಂತಲೇ ಅವನನ್ನು ಸೂರ್ಯನಾರಾಯಣ ಎಂದು ಕರೆದು ಗೌರವಿಸಿ ಭಕ್ತಿಯನ್ನು ತೋರಲಾಯಿತು. ಅದರ ಹಲವು ಮಜಲುಗಳನ್ನಿಲ್ಲಿ ವಿವರಿಸಲು ಪ್ರಯತ್ನಿಸಲಾಗಿದೆ.

ಯಲ್ಲಿ ಬರುತ್ತಿರುವವರನ್ನು ಕಂಡು ಅವರನ್ನು ಹೇಗೆ ಪೋಷಿಸುವುದು ಎಂಬ ಚಿಂತೆಗೆ ಒಳಗಾದಾಗ ಪುರೋಹಿತರಾದ ಧೌಮ್ಯರು ಸೂರ್ಯೋಪಾಸನೆಯ ಮಹತ್ವವನ್ನು ತಿಳಿಸುತ್ತಾ "ಯುಧಿಷ್ಠಿರ, ಹಿಂದೊಮ್ಮೆ ಬರಗಾಲ ಬಂದು ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ಎಲ್ಲಾ ಪ್ರಾಣಿಗಳು ಆಹಾರವಿಲ್ಲದೆ ಹಸಿವು ಬಳಲಿಕೆ ಬಾಯಾರಿಕೆಗಳಿಂದ ಪರಿತಪಿಸುತ್ತಿರುವಾಗ ಸೂರ್ಯದೇವನು ಪ್ರಾಣಿಗಳ ವಿಷಯದಲ್ಲಿ ಕನಿಕರಗೊಂಡು ಉತ್ತರ ದಿಕ್ಕಿಗೆ ಹೋಗಿ ತನ್ನ ರಶ್ಮಿಗಳಿಂದ ರಸವನ್ನು ಹೀರಿ ದಕ್ಷಿಣ ಧ್ರುವಕ್ಕೆ ಹೋಗಿ ಭೂಮಿಯ ಮೇಲ್ಭಾಗದಲ್ಲಿ ತನ್ನ ತೇಜಸ್ಸನ್ನು ನಿಲ್ಲಿಸಿದನು. ಚಂದ್ರನು ಸೂರ್ಯನ ಸಹಾಯಕ್ಕೆ ಬಂದು ಅವನ ಕಿರಣಗಳ ಮೂಲಕ ಮಳೆಯನ್ನು ಸುರಿಸಿದನು. ಮಳೆ ಬಂದು ಸಸ್ಯಗಳು ಬೆಳೆದು ನಿಂತವು. ಈ ಕಾರಣದಿಂದ ಅಂದಿನಿಂದ ಇಂದಿನವರೆಗೂ ಭೂಮಿಯಲ್ಲಿ ಷಡ್ರಸಗಳ ಉತ್ಪಾದನೆಗೆ ಸೂರ್ಯನೇ ಮುಖ್ಯಕಾರಣನು. ಅವನೇ ಆಹಾರಕ್ಕೆ ತಂದೆ. ನೀನು ಸೂರ್ಯನನ್ನು ಅಷ್ಟೋತ್ತರ ಶತನಾಮದಿಂದ ಉಪಾಸಿಸು" ಎಂಬುವುದಾಗಿ ಹೇಳಿದನು. ಧೌಮ್ಯರು ಉಪದೇಶಿಸಿದ "ಸೂರ್ಯೋऽರ್ಯಮಾ" ಎಂಬ ಅಷ್ಟೋತ್ತರವು ಯುದಿಷ್ಠಿರನು ಸೂರ್ಯನನ್ನು ಸ್ತುತಿಸಿದ "ತ್ವಂ ಭಾನೋ ಜಗತಶ್ಚಕ್ಷುಃ" ಎಂಬುವ ಸ್ತೋತ್ರವು ಜಗತ್ ಪ್ರಸಿದ್ಧವಾಗಿವೆ.

ತದೇಕಚಿತ್ತನಾಗಿ ಸ್ತೋತ್ರಮಾಡುತ್ತಿದ್ದ ಯುಧಿಷ್ಠಿರನ ಭಕ್ತಿಗೆ ಸೂರ್ಯನು ಪ್ರತ್ಯಕ್ಷನಾಗಿ ಅಕ್ಷಯ ಪಾತ್ರೆಯನ್ನು ನೀಡಿ "ಯುಧಿಷ್ಠಿರ ನಿನಗೆ ನಾನು ಹನ್ನೆರಡು ವರ್ಷಗಳ ಕಾಲ ಅನ್ನವನ್ನು ನೀಡುತ್ತೇನೆ. ಪ್ರಾತಃಕಾಲದಲ್ಲಿ ಪಾಂಚಾಲಿಯು ಭುಂಜಿಸುವವರೆಗೂ ಈ ಪಾತ್ರೆಯಲ್ಲಿ ಅನ್ನ, ಭಕ್ಷ್ಯ, ಭೋಜ್ಯ ಮುಂತಾದವು ಯಥೇಚ್ಛವಾಗಿ ಎಲ್ಲರಿಗು ದೊರೆಯುತ್ತದೆ" ಎಂಬುದಾಗಿ ಹೇಳಿ ಪಾಂಡವರ ಆಪತ್ ಕಾಲದಲ್ಲಿ ಸಹಾಯಮಾಡಿದ ಲೋಕಬಂಧು.

ದ್ರೌಪದಿಯು ವಿರಾಟನಗರದಲ್ಲಿ ಊಳಿಗದಲ್ಲಿದ್ದಾಗ ಕೀಚಕನು ಅವಳನ್ನು ಕೆಣಕಲು ಬಂದಾಗ ದ್ರೌಪದಿ ಸೂರ್ಯನನ್ನು ಪ್ರಾರ್ಥಿಸಿಕೊಂಡಾಗ ಆಕೆಯನ್ನು ರಕ್ಷಿಸಲು ತನ್ನ ದೂತನನ್ನು ಕಳುಹಿಸಿ ಅವಳ ಮಾನವನ್ನು ಕಾಪಾಡಿದ ಆಪತ್‌ಬಾಂಧವ ಸೂರ್ಯ. ಧೌಮ್ಯರು ಅಸ್ತಾಚಲದಲ್ಲಿ ಇರುವ ಸೂರ್ಯನನ್ನು ಕುರಿತು "ಯಮಾಹುಃ ಸರ್ವಭೂತಾನಾಂ ಪ್ರಕೃತೇಃ ಪ್ರಕೃತಿಂ ಧ್ರುವಂ ಅನಾದಿನಿಧನಂ ದೇವಂ ಪ್ರಭುಂ ನಾರಾಯಣಂ ಸ್ವಯಮ್"- ಸರ್ವ ಭೂತಗಳಿಗೂ ಮೂಲಕಾರಣನಾದ ಆದಿ ಮಧ್ಯಾಂತ ರಹಿತನಾದ ಪ್ರಭುವಾದ ಪರಮ ಶ್ರೇಷ್ಠನಾದ ಸೂರ್ಯನು ಸಾಕ್ಷಾತ್ ನಾರಾಯಣನು ಎಂಬುದಾಗಿ ಹೊಗಳಿದ್ದಾರೆ. ಶ್ರೀ ಮಹಾವಿಷ್ಣುವು ವಾಮನನಾಗಿ ಕಶ್ಯಪ ಅದಿತಿಯರ ಮಗನಾಗಿ ಹುಟ್ಟಿದಾಗ ಆ ಪರಮ ಪುರುಷನ ಉಪನಯನ ಕಾಲದಲ್ಲಿ ಸೂರ್ಯನೇ ಸ್ವತಃ ಬಂದು ಗಾಯತ್ರೀ ಮಂತ್ರೋಪದೇಶವನ್ನು ಮಾಡಿದನು. ಆ ಪ್ರಭಾವದಿಂದ ವಾಮನನು ಬಲಿಯ ಯಜ್ಞಶಾಲೆಗೆ ಬಂದು ತ್ರಿವಿಕ್ರಮ ಅವತಾರವನ್ನು ತೋರಿದ. ಜಗವನ್ನು ಅಳೆದ, ಉದ್ಧರಿಸಿದ ಮನು ಕುಲವನ್ನು.

ವ್ಯಾಸಶಿಷ್ಯರಾದ ವೈಶಂಪಾಯನರು ಯಜುರ್ವೇದವನ್ನು ೨೭ ಶಾಖೆಗಳನ್ನಾಗಿ ವಿಂಗಡಿಸಿದ ಮಹರ್ಷಿ. ಅವರು ಬ್ರಹ್ಮರಾತನ ಮಗನಾದ ಯಾಜ್ಞವಲ್ಕ್ಯರಿಗೆ ಯಜುರ್ವೇದವನ್ನು ಉಪದೇಶಮಾಡಿದ್ದರು. ವೈಶಂಪಾಯನರು ಒಮ್ಮೆ ಬ್ರಹ್ಮ ಹತ್ಯಾದೋಷಕ್ಕೆ ಒಳಗಾಗುವ ಸಂದರ್ಭ ಒದಗಿ ಬಂದಾಗ ಯಾಜ್ಞವಲ್ಕ್ಯರ ಅದರ ನಿವಾರಣೆಗಾಗಿ ಪ್ರಯತ್ನಪಟ್ಟಾಗ ಗುರು ಶಿಷ್ಯರಿಗೆ ಭಿನ್ನಾಭಿಪ್ರಾಯ ಬಂದಿತು. ಗುರುವು ತಾನು ಕಲಿಸಿದ ವಿದ್ಯೆಯನ್ನು ವಮನ ಮಾಡಬೇಕೆಂದು ಕೋರಿದಾಗ ಯಾಜ್ಞವಲ್ಕ್ಯರು ಹಾಗೆಯೇ ತಾವು ಕಲಿತ ವಿದ್ಯೆಯನ್ನು ವಾಂತಿ ಮಾಡಿದರು. ಯಾಜ್ಞವಲ್ಕ್ಯರಿಂದ ಪರಿತ್ಯಕ್ತಗಳಾದ ಯಜಸ್ಸುಗಳನ್ನು ಬೇರೆ ಶಿಷ್ಯರು ತಿತ್ತಿರಿ ಪಕ್ಷಿಗಳಾಗಿ ಸ್ವೀಕರಿಸಿದರು. ಯಾಜ್ಞ ವಲ್ಕ್ಯರು ವೇದಗಳನ್ನು ಪಡೆಯಲು ಶುಚಿರ್ಭೂತರಾಗಿ ಸೂರ್ಯನನ್ನು ಕುರಿತು-

ನಮಸ್ಸವಿತ್ರೇ ದ್ವಾರಾಯ
ಮುಕ್ತೇರಮಿತ ತೇಜಸೇ
ಋಗ್ಯಜುಸ್ಸಾಮ ಭೂತಾಯ
ತ್ರಯಿಧಾಮ್ನೇ ಚ ತೇ ನಮಃ
ನಮಃ ಸವಿತ್ರೇ ಸೂರ್ಯಾಯ
ಭಾಸ್ಕರಾಯ ವಿವಸ್ವತೇ
ಆದಿತ್ಯಾಯಾದಿ ಭೂತಾಯ
ದೇವಾದೀನಾಂ ನಮೋ ನಮಃ

ಎಂಬುವುದಾಗಿ ನಾನಾ ಪ್ರಕಾರವಾಗಿ ಸ್ತೋತ್ರ ಮಾಡಲು ಸೂರ್ಯನು ಅಶ್ವರೂಪ ತಾಳಿ ಯಾಜ್ಞವಲ್ಕ್ಯರಿಗೆ ಪ್ರಕೃತದಲ್ಲಿ ಯಾರಿಗೂ ತಿಳಿಯದ ಯಜಸ್ಸುಗಳನ್ನು ಉಪದೇಶಮಾಡಿದನು. ಈ ಶಾಖೆಗಳಿಗೆ ಶುಕ್ಲಯಜುರ್ವೇದವೆಂದೂ, ಸೂರ್ಯನು ಅಶ್ವರೂಪವಾಗಿ ಬಂದು ಉಪದೇಶಮಾಡಿದ್ದರಿಂದ ವಾಜಸನೇಯವೆಂದು ಆ ವೇದಕ್ಕೆ ಹೆಸರಾಯಿತು. ಈ ವೇದದಲ್ಲಿ ಕಾಣ್ವ ಮುಂತಾದ ಹದಿನೈದು ಶಾಖಾ ಭೇದಗಳಿವೆ.

## ಸೂರ್ಯನಿಗೆ ಶ್ರೀರಾಮನ ನಮನ

ಶ್ರೀಮದ್ರಾಮಾಯಣದ ಯುದ್ಧಕಾಂಡದ ೧೦೭ನೇ ಸರ್ಗದಲ್ಲಿ ಅಗಸ್ತ್ಯರು ಶ್ರೀರಾಮನಿಗೆ ಆದಿತ್ಯಹೃದಯವನ್ನು ಉಪದೇಶ ಮಾಡುವ ಪ್ರಸಂಗ. ರಾಮರಾವಣರ ಯುದ್ಧ ನಡೆಯುತ್ತಿರುತ್ತೆ. ರಾವಣನು ಅಜೇಯನಾಗಿ ಯುದ್ಧ ಮಾಡುತ್ತಿರುವಾಗ ರಾವಣನನ್ನು ಜಯಿಸುವ ಪರಿ ಹೇಗೆಂದು ಚಿಂತಾಕ್ರಾಂತನಾಗಿರುವಾಗ ಶ್ರೀರಾಮನ ಬಳಿಗೆ ಅಗಸ್ತ್ಯಮಹರ್ಷಿ ಬಂದು ರಾಮನಿಗೆ ಧೈರ್ಯವನ್ನು ಹೇಳಿ ಆತನ ಮಹಿಮೆಯನ್ನು ಹೇಳುತ್ತಾ--

"ರಾಮ ರಾಮ ಮಹಾಬಾಹೋ
ಶೃಣು ಗುಹ್ಯಂ ಸನಾತನಂ
ಯೇನ ಸರ್ವಾನರೇನ್ ವತ್ಸ
ಸಮರೇ ವಿಜಯಿಷ್ಯಸಿ
ಆದಿತ್ಯ ಹೃದಯಂ ಪುಣ್ಯಂ
ಸರ್ವ ಶತ್ರುವಿನಾಶನಂ
ಜಹಾವಹಂ ಜಪೇನ್ನಿತ್ಯಂ
ಅಕ್ಷಯ್ಯಂ ಪರಮಂ ಶಿವಂ
ಸರ್ವ ಮಂಗಲ ಮಾಂಗಲ್ಯಂ
ಸರ್ವಪಾಪ ಪ್ರಣಾಶನಂ
ಚಿಂತಾಶೋಕ ಪ್ರಶಮನಂ
ಆಯುರ್ವರ್ಧನ ಮುತ್ತಮಂ"

ರಶ್ಮಿಮಂತಂ ಸಮುದ್ಯಂತಂ
ದೇವಾಸುರ ನಮಸ್ಕೃತಂ
ಪೂಜಯಸ್ವ ವಿವಸ್ವಂತಂ
ಭಾಸ್ಕರಂ ಭುವನೇಶ್ವರಮ್............

(ವತ್ಸ ರಾಮ, ಯಾವ ಮಂತ್ರದಿಂದ ಎಲ್ಲಾ ಶತ್ರುಗಳನ್ನು ಜಯಿಸಬಲ್ಲೆಯೋ ಅಂತಹ ಸನಾತನವಾದ ಆದಿತ್ಯ ಹೃದಯವೆಂಬ ಪುಣ್ಯಕರವಾದ, ಶತ್ರುಗಳನ್ನು ನಾಶಮಾಡುವಂತಹ, ಜಯವನ್ನು ನೀಡಬಲ್ಲಂತಹ, ಅಕ್ಷಯಫಲಗಳನ್ನು ಕೊಡುವಂತಹ, ಪರಮ ಮಂಗಲಪ್ರದವಾದ, ಸರ್ವ ಪಾಪಗಳನ್ನು ಹೋಗಲಾಡಿಸುವ, ಚಿಂತೆಗಳನ್ನು ದೂರಮಾಡುವ, ಆಯಸ್ಸನ್ನು ವೃದ್ಧಿಪಡಿಸುವ (ಆದಿತ್ಯ ಹೃದಯವನ್ನು) ರಹಸ್ಯವನ್ನು ತಿಳಿಸುವೆ. ಕೇಳು - ಅಂತಹ ಭಾಸ್ಕರನನ್ನು ಭುವನೇಶ್ವರನನ್ನು ಸ್ತುತಿಸಿ ಜಯಶೀಲನಾಗು" ಎಂಬುವುದಾಗಿ ಹೇಳಿ "ಆದಿತ್ಯಃ ಸವಿತಾ ಸೂರ್ಯಃ" ಎಂಬುವುದಾಗಿ ಮೊದಲಾಗುವ ಹನ್ನೆರಡು ಮಂತ್ರಗಳ ಶ್ಲೋಕಗಳನ್ನು ಉಪದೇಶಮಾಡಿದನು ಅಗಸ್ತ್ಯ ಮಹರ್ಷಿ. ಸೂರ್ಯನ ಮಹಿಮೆಯನ್ನು ಮತ್ತೆ ಹೇಳುವಾಗ--

ವೇದಾಶ್ಚ ಕ್ರತವಶ್ಚೈವ
ಕ್ರತೂನಾಂ ಫಲಮೇವ ಚ

ಯಾನಿ ಕೃತ್ಯಾನಿ ಲೋಕೇಷು
ಸರ್ವ ಏಷ ರವಿಃ ಪ್ರಭುಃ

ವೇದಗಳು, ಯಾಗಗಳು, ಆ ಕ್ರತುಗಳ ಫಲಗಳು, ಈ ಲೋಕದಲ್ಲಿ ನಡೆಯುವ ಎಲ್ಲಾ ಕೃತ್ಯಗಳು, ಅವುಗಳ ಕಾರ್ಯಕ್ಕೂ ಸರ್ವಾತ್ಮಕನಾದ ಸೂರ್ಯನೇ ಪ್ರಭು - ಎಂಬುವುದಾಗಿ ತಿಳಿಸುತ್ತಾರೆ. ಅಗಸ್ತ್ಯರ ಉಪದೇಶದಂತೆ ಶ್ರೀರಾಮನು ಸಂತೋಷದಿಂದ, ಚಿಂತಾರಹಿತನಾಗಿ ಸೂರ್ಯನನ್ನು ಸ್ತುತಿಸಲು ಸೂರ್ಯನು ಪ್ರತ್ಯಕ್ಷನಾಗಿ ಶ್ರೀರಾಮನಿಗೆ ರಾವಣನನ್ನು ಕೊಲ್ಲಲು ಉತ್ತೇಜನ ಧೈರ್ಯವನ್ನು ನೀಡುತ್ತಾನೆ.

ಆದಿತ್ಯ ಹೃದಯದ ರಹಸ್ಯ ಸೂರ್ಯಭಗವಾನನು ಸಮಸ್ತ ದೇವಾತ್ಮ ಸ್ವರೂಪನು, ಈತನು ಎಲ್ಲಾ ಭೂತಗಳಲ್ಲಿ ಅಂತರ್ಯಾಮಿಯಾಗಿರುತ್ತಾನೆ. ಸಮಸ್ತ ಲೋಕಗಳನ್ನು ತನ್ನ ಕಿರಣಗಳಿಂದ ರಕ್ಷಿಸುತ್ತಿರುತ್ತಾನೆ. ಈತನು ತ್ರಿಮೂರ್ತಿ ಸ್ವರೂಪನು. ಸಕಲ ಲೋಕಗಳ ಸೃಷ್ಟಿ, ಸ್ಥಿತಿ, ಸಂಹಾರಕರ್ತನು. ಈತನ ಧ್ಯಾನ ಸಕಲ ಪಾಪ ಹರಣ - ಸಂಕಟಗಳ ನಿವಾರಣ - ಮೋಕ್ಷಪ್ರದ. ಆದಿತ್ಯಹೃದಯದ ನಿತ್ಯ ಪಠನದಿಂದ ದೀರ್ಘಾಯುಷ್ಯಲಕ್ಷ್ಯವು. ಆದಿವ್ಯಾಧಿಗಳು ನಿವಾರಣೆ ಆಗುತ್ತವೆ.

ಶ್ರೀರಾಮನ ಪುತ್ರನಾದ ಲವನಿಗೆ ವಾಲ್ಮೀಕಿ ಮುನಿಗಳು ಸೂರ್ಯನ ಉಪಾಸನಾ ಮಂತ್ರವನ್ನು ಉಪದೇಶಿಸಿ ಅಕ್ಷಯವಾದ ಬಿಲ್ಲನ್ನು ಪಡೆಯುವಂತೆ ಆಶೀರ್ವಾದ ಮಾಡಿದಾಗ ಲವನು ಸೂರ್ಯನನ್ನು ಕುರಿತು

"ಮಿತ್ರಾಯ ಸೂರ್ಯಾಯ
ಹಂಸಾಯ ಪೂಷ್ಣೇ ಸವಿತ್ರೇ
ಜಗಚ್ಚಕ್ಷುಷೇ ಚಂಡಘೃಣಯೇ
ಪವಿತ್ರಾಯ ಪಿಂಗಾಯ ಪುರುಷಾಯ
ಭಾನವೇ ಜ್ಯೋತಿಷೇ ಭಾಸ್ಕರಾಯ
ಸತ್ಯೈಕರೂಪಾಯ ವಿಮಲಾಯ ವಿಶ್ವರಕ್ಷಿತ್ರೇ
ಸಹಸ್ರ ಕಿರಣಾಯ ರವಯೇ ಮಂದಪಿತ್ರೇ
ದಿವಾಕರಾಯ ಬ್ರಹ್ಮವಿಷ್ಣು ರುದ್ರಾತ್ಮನೇ
ತುಭ್ಯಂ ನಮಃ

ಎಂಬುವುದಾಗಿ ಪ್ರಾರ್ಥಿಸುವನು. ಲಕ್ಷ್ಮೀಶನ ಜೈಮಿನಿ ಭಾರತದ ಈ ಭಾಗ ಅನುಪಮವಾಗಿದೆ. ಇದೇ ಉತ್ತರ ಕಾಂಡ ರಾಮಾಯಣದಲ್ಲಿ ಸೂರ್ಯನು ಹನುಮಂತನಿಗೆ ಗುರುವಾಗಿ ಎಲ್ಲಾ ವಿದ್ಯೆಗಳನ್ನು ಉಪದೇಶಮಾಡಿದ ಪ್ರಸಂಗವು ಗಮನಾರ್ಹವಾದುದು.

## ಸೂರ್ಯೋಪಾಸನೆ

ವೇದ ಅನಾದಿ. ಋಗ್ವೇದದಲ್ಲಿ ಸೂರ್ಯನನ್ನು ಕುರಿತು ಸ್ತುತಿಸುವಾಗ :

ಚಿತ್ರಂ ದೇವಾನಾಂ ಉದಗಾದನೀಕಂ
ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ
ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ
ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ

ಆಶ್ಚರ್ಯಕರವಾದ ವರುಣನಿಗೆ, ಅಗ್ನಿಗೆ ಕಣ್ಣಾಗಿರುವ ಸೂರ್ಯನು ಸ್ಥಾವರ ಜಂಗಮಾತ್ಮಕವಾದ ಸಮಸ್ತ ಜಗತ್ತಿಗೂ (ಸ್ವರ್ಗ, ಪೃಥಿವೀ ಅಂತರಿಕ್ಷ ಇತ್ಯಾದಿಗಳಿಗೂ) ತನ್ನ ಕಿರಣಗಳಿಂದ ಬೆಳಕನ್ನು ಕೊಡುತ್ತಾ ಅಂತರಾತ್ಮನಾಗಿ ಪ್ರಕಾಶಿಸುತ್ತಿದ್ದಾನೆಂದು ಘೋಷಿಸುವ ಈ ಮಹಾಮಂತ್ರವನ್ನು ನಾವೆಲ್ಲ ಸಂಧ್ಯಾವಂದನೆಯನ್ನು ಮಾಡುವಾಗ ಪುನಶ್ಚರಣೆ ಮಾಡುತ್ತೇವೆ. ಸೂರ್ಯನೇ ಜಗತ್ತಿಗೆ ಆತ್ಮ ಕಾರ್ಯನೂ, ಕಾರಣನೂ ಆಗಿ ಸಕಲ ಪ್ರಾಣಿಗಳ ಸಂರಕ್ಷಣೆ ಮಾಡುವ ಪ್ರಭುವಾಗಿದ್ದಾನೆ. ಕಣ್ಣಿಗೆ ಕಾಣುವ ದೇವರು ಆತ. ಜ್ಞಾನಕ್ಕೆ ದೇವತೆಯಾಗಿ ನಮ್ಮ ಬುದ್ಧಿಯನ್ನು ನಿಯಂತ್ರಿಸುವವನು ಆತನೇ. ಕತ್ತಲು ಕಳೆಯದೇಕಾದರೆ ಬೆಳಕು ಬೇಕೇಬೇಕು. ಆ ಬೆಳಕನ್ನು ನೀಡುವವನು ಸೂರ್ಯ ಭಗವಾನನು. ಪ್ರಾಣಿಗಳಿಗೆ ಕರ್ಮ ಪ್ರವೃತ್ತಿಯನ್ನು ನೀಡುವವನೂ ಅವನೇ. ಪ್ರೇರಕನೂ ಸೂರ್ಯನೇ, ಸಕಲ ಪಾಪ ನಿವಾರಕನೂ ಅವನೇ. ಋಗ್ವೇದದ "ಉದುತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ ದೃಶೇ ವಿಶ್ವಾಯ ಸೂರ್ಯಂ" ಎಂಬುವ ಸಂಧ್ಯಾವಂದನೆಯ ಮಂತ್ರದ ಗಂಭೀರ ಅರ್ಥವು ಸೂರ್ಯ ರಶ್ಮಿಗಳು ಕತ್ತಲೆಯನ್ನು ಹೋಗಲಾಡಿಸುವಂತೆ ಸೂರ್ಯನು ಸಕಲ ಪ್ರಾಣಿಗಳ ಜೀವ. ಸಕಲ ಪ್ರಾಣಿಗಳು ತನ್ನನ್ನು ನೋಡಲಿ ಎಂದು ಅವನು ಉದಯಿಸುತ್ತಿದ್ದಾನೆ.

ಈ ಮಂತ್ರದ ವಿಶೇಷ ಅರ್ಥ ಸಕಲ ಶಾಸ್ತ್ರೋದ್ಧಾರಕನಾದ ಭಗವಂತನನ್ನು (ಸೂರ್ಯನನ್ನು) ಜ್ಞಾನಿಗಳಾದವರು ಜ್ಞಾನ ಚಕ್ಷುಸ್ಸಿನಿಂದ ತಮ್ಮ ಹೃದಯಗಳಲ್ಲಿ ಧ್ಯಾನಮಾಡುತ್ತಾರೆ ಎಂಬುವುದಾಗಿ, ಬ್ರಹ್ಮಪುರಾಣದಲ್ಲಿ ಶ್ರೀಕೃಷ್ಣನ ಮಗನಾದ ಸಾಂಬನು ರೋಗಗ್ರಸ್ತನಾಗಿದ್ದಾಗ ಸೂರ್ಯನ ಪ್ರಾರ್ಥನೆ ಮಾಡಿ ಆರೋಗ್ಯವಂತನಾದ ಪ್ರಸಂಗವನ್ನು ನಾವು ಕಾಣಬಹುದು. ಸಮಸ್ತ ದೇವತೆಗಳು, ಋಷಿಗಳು ವೈದಿಕರು ಅಂದಿನಿಂದ ಇಂದಿನವರೆಗೂ ಸೂರ್ಯೋಪಾಸನೆಯನ್ನು ಮಾಡುತ್ತಾ ಕೃತಾರ್ಥರಾಗಿದ್ದಾರೆ. ಸರ್ವ ಪ್ರಾಣಿಗಳ ಪುಣ್ಯ ಪಾಪಗಳಿಗೆ ಸಾಕ್ಷೀಭೂತನಾಗಿ ಅವರ ಕರ್ಮಗಳಿಗೆ ಫಲವನ್ನೂ ಕೊಡುವ ವಿಧಾಯಕನಾಗಿದ್ದಾನೆ. ಸರ್ವ ಪಾಪಹರನು ಅವನಾಗಿರುವುದರಿಂದಲೇ ನಾವು ಸಂಧ್ಯಾವಂದನೆಯನ್ನು ಮಾಡುವಾಗ ಸೂರ್ಯಶ್ಚ ಮಾಮನ್ಯುಶ್ಚ ಮನ್ಯುಪತಯಶ್ಚ..... ಅಮೃತಯೋನಾ ಸೂರ್ಯೇ ಜ್ಯೋತಿಷಿ ಜುಹೋಮಿ ಸ್ವಾಹಾ ಎಂಬುದಾಗಿ ಪಠಿಸುತ್ತಾ ಸೂರ್ಯ ಭಗವಾನನನ್ನು ಉಪಾಸನೆ ಮಾಡುತ್ತೇವೆ. ಯಜುರ್ವೇದವು 'ದೇವ್ಯೋ ವಃ ಸವಿತಾ ಪ್ರಾಪಯತು ಶ್ರೇಷ್ಠತಮಾಯ ಕರ್ಮಣೇ' ಎಂಬುವ ಮಂತ್ರದಲ್ಲಿ ಸೂರ್ಯನಾರಾಯಣನು ನಮ್ಮೆಲ್ಲರಿಗೆ ಸದ್ಬುದ್ಧಿ ಕೊಟ್ಟು ಶ್ರೇಷ್ಠತಮವಾದ ಕರ್ಮಗಳಲ್ಲಿ ತೊಡಗಿಸಲಿ ಎಂಬುವುದಾಗಿ ತಿಳಿಸುತ್ತೆ. ಹೀಗೆ ಸೂರ್ಯೋಪಾಸನೆಯು ಮಾನವರಿಗೆ ಸಕಲ ಪುರುಷಾರ್ಥಗಳನ್ನು ನೀಡುತ್ತದೆ ಎಂಬುವ ಭಾವನೆ ಭಕ್ತಿ, ವಿಶ್ವಾಸ, ವೈದಿಕರಲ್ಲಿ ಬೆಳೆದುಬಂದ ಸಂಪ್ರದಾಯ ನಿತ್ಯ ಸತ್ಯ.

## ಜ್ಯೋತಿಷ್ಯ ಶಾಸ್ತ್ರದಲ್ಲಿ ರವಿ

ನವಗ್ರಹಗಳ ಅಧಿಪತಿ ಸೂರ್ಯ. ಸೂರ್ಯನಿಂದಲೇ ಪಂಚಭೂತಗಳ ಸೃಷ್ಟಿಯಾಗಿರುವ ವಿಷಯ ವಿದಿತ. ಜಗತ್ತಿನ ಸ್ಥಿತಿಲಯಕಾರಣನು ಸೂರ್ಯನಾದರೂ ರವಿಯು ಕಾಲಪುರುಷನ ಆತ್ಮಕಾರಕ ಗ್ರಹ, ರಾಜಗ್ರಹ, ಸ್ಥಿರಸ್ವಭಾವ, ರಕ್ತಶ್ಯಾಮ ಬಣ್ಣದವ, ಕ್ರೂರ ಪುರುಷಗ್ರಹ, ಸತ್ವ ಗುಣಶೀಲ ಪ್ರಸನ್ನ, ಪಿತೃಕಾರಕ, ತಾಮ್ರವರ್ಣಕ್ಕೆ ಅಧಿಪತಿ, ಪಿತ್ತಪ್ರಕೃತಿ ಸ್ವಭಾವ, ನಮ್ಮ ಶರೀರದ ಎಲುಬುಗಳಿಗೆ ಕಾರಕನೀತ, ಸಕಲ ರೋಗಗಳ ನಿವಾರಣೆ ಮಾಡುವವ, ಪ್ರಪಂಚದ ಪ್ರತ್ಯಕ್ಷ ದೈವ. ಇವನನ್ನು ಧ್ಯಾನಮಾಡುವಾಗ ನಾವು ದ್ವಿಭುಜಂ ಪದ್ಮಹಸ್ತಂ ಚ ವರದಂ ಮುಕುಟಾನ್ವಿತಂ ಧ್ಯಾಯೇತ್ ದಿವಾಕರಂ ದೇವಂ ಸರ್ವಾಭೀಷ್ಟ ಪ್ರದಾಯಕಂ - ಎಂಬುದಾಗಿ ಅವನನ್ನು ಸ್ತುತಿಸುತ್ತೇವೆ. ಋಗ್ವೇದದ ಸೂತ್ರದಲ್ಲಿ --

ಇದಂ ಶ್ರೇಷ್ಠಂ ಜ್ಯೋತಿಷಾಂ
ಜ್ಯೋತಿರಾಗಾತ್ ಚಿತ್ರಃ
ಪ್ರಕೇತೋ ಅಜನಿಷ್ಟವಿಭ್ವಾ
ಯಥಾ ಪ್ರಸೂತಾ ಸವಿತುಃ
ಸವಾಯ ಏವಾ ರಾತ್ರ್ಯುಷಸೇ
ಯೋ ನಿಮಾರೈತ್

ಎಂಬುದಾಗಿ ಹೇಳುವಾಗ ಗ್ರಹ ನಕ್ಷತ್ರಗಳಿಗೆಲ್ಲಾ ಶ್ರೇಷ್ಠವಾಗಿರುವ ಉಷಸ್ಸು, ಅಂಧಕಾರ ತೊಲಗಲು ಉಷಸ್ಸಿನ ರಶ್ಮಿಗಳು ಹರಡಲು ಸೂರ್ಯಭಗವಾನನೇ ಕಾರಣ. ಉಷಸ್ಸಿನ ದರ್ಶನ ಸರ್ವ ಪಾಪಹರಣ. ಸೂರ್ಯನ ಸಹಚರಿ ಈ ಉಷಸ್ಸು, ಜ್ಯೋತಿ ಪ್ರಜ್ಞೆಗೆ ಅಧಿದೇವತೆ ಸೂರ್ಯನ ವಾಸಸ್ಥಳ

## ಸಪ್ತಗಿರಿ
## ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

೧) ಲೇಖನಗಳು ಆರು ಪುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

೬) ಗೃ ಹ ಲ ಕ್ಷ್ಮಿ ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

**ಸಂಪಾದಕರು**
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ--೫೧೭ ೫೦೭
ಚಿತ್ತೂರು ಜಿಲ್ಲೆ, ಆಂ. ಪ್ರ.

ದೇವಾಲಯಗಳು. ಪೂರ್ವದಿಕ್ಕಿನ ಅಧಿಪತಿ, ಇವನ ರತ್ನವು ಮಾಣಿಕ್ಯ. ಮೇಷರಾಶಿಯು ರವಿಯ ಉಚ್ಚ ಕ್ಷೇತ್ರ. ಸಿಂಹರಾಶಿ ಮೂಲ ತ್ರಿಕೋಣ. ತುಲಾ ರಾಶಿ ನೀಚಕ್ಷೇತ್ರ. ಆದಿತ್ಯಕವಚವನ್ನು ಪಠಣ ಮಾಡುವವರಿಗೆ ರೋಗಗಳು ನಿವಾರಣೆಯಾಗುತ್ತವೆ 'ಸರ್ವರೋಗಭಯಾದಿಭ್ಯೋ ಮುಚ್ಯತೇ ನಾತ್ರ ಸಂಶಯಃ', ಸಂವತ್ಸರ ಮುಪಾಸಿತ್ವಾ ಸಾಮ್ರಾಜ್ಯ ಪದವೀಂ ಲಭತೆ. ಒಂದು ವರ್ಷಕಾಲ ಶ್ರದ್ಧೆಯಿಂದ ಜಪಿಸಿದರೆ ಮಾನವನು ಸಾಮ್ರಾಜ್ಯಪದವಿಯನ್ನು ಹೊಂದುವನು ಎಂಬುವುದಾಗಿ ಹೇಳುತ್ತಾರೆ. ಸೂರ್ಯನ ಜನ್ಮಸ್ಥಳ ಕಳಿಂಗದೇಶ. ಅವನ ಜನ್ಮದಿನ ಪ್ರಭವ ಸಂವತ್ಸರ ಮಾಘಶುಕ್ಲ ಸಪ್ತಮಿ, ವಿಶಾಖಾ ನಕ್ಷತ್ರ (ಅಗ್ನಿದೇವತೆ) ಕಾಶ್ಯಪ ಗೋತ್ರ ವಿಶ್ವಾಮಿತ್ರ ಸಂತತಿ. ಗ್ರಹಮಂಡಲದಲ್ಲಿ ಮಧ್ಯ ಬಿಂದು (ಕೇಂದ್ರ) ಈತನಿಗೆ ಪ್ರಿಯವಾದ ಧಾನ್ಯ ಗೋಧಿ. ಆಯುಧಗಳು ಸಪ್ತರಜ್ಜುಗಳು. ಏಕ ಚಕ್ರರಥ, ಪತ್ನಿಯರು ಸಂಜ್ಞಾ, ಛಾಯಾ. ಶಕ್ತಿ ದೇವತೆ ರೇಣುಕಾ. ಸೂರ್ಯನ ವಾಹನ ಹರಿತ ಸಪ್ತಾಶ್ವ. ಅಭಿಮಾನದೇವತೆ ರುದ್ರನು. ಸಿಂಹ ರಾಶಿಯ ಅಧಿಪತಿ ಕಪಿಲಧೇನುವನ್ನು ಸೂರ್ಯ ಪ್ರೀತ್ಯರ್ಥ ದಾನಮಾಡಿದರೆ ಒಳಿತು. ಸೂರ್ಯನು ವೃಷಭ, ಮಿಥುನ, ಕನ್ಯಾ ವೃಶ್ಚಿಕದಿಂದ ಮೀನ ಲಗ್ನದವರೆಗೆ ಇದ್ದರೆ ಜಾತಕನು ಶೂರನಾಗುತ್ತಾನೆ. ಸೂರ್ಯನು ಮೇಷಲಗ್ನದಲ್ಲಿ ಇದ್ದರೆ ಸ್ವಾರ್ಜಿತವಿತ್ತ, ದೃಷ್ಟಿದೋಷವುಳ್ಳವನಾಗುತ್ತಾನೆ.

ಪ್ರತಿಯೊಬ್ಬರ ಜಾತಕಗಳಲ್ಲಿ ಲಗ್ನದ ನವಮಸ್ಥಾನದ ಹಾಗೂ ದಶಮಭಾವಗಳ ಭಾವಕಾರಕನು ರವಿಯೇ ಆಗಿರುವುದರಿಂದ ಉನ್ನತ ಪದವಿ - ಕೀರ್ತಿ - ಸಂಪತ್ತುಗಳನ್ನು ನೀಡುವವನು ಸೂರ್ಯನೇ ಆಗಿದ್ದಾನೆ. ಸೂರ್ಯನು ಚಂದ್ರನಿಗೆ ಗುರುವು. ಕುಜನಿಗೆ ಮಿತ್ರನು. ತೃತೀಯಸ್ಥಾನದಲ್ಲಿ ಶುಭಫಲವನ್ನು ಕೊಡುವವನೂ ಶುಕ್ರ ಶನಿಗಳಿಗೆ ಶತ್ರುವೂ ಆಗಿರುವುದರಿಂದ ಜಾತಕದಲ್ಲಿ ಸೂರ್ಯನ ಸ್ಥಾನ ಬಹಳ ಮುಖ್ಯವಾಗಿದೆ. ಸೂರ್ಯನ ಸ್ತೋತ್ರಗಳಾದ--

"ಆದಿದೇವ ನಮಸ್ತುಭ್ಯಂ
ಪ್ರಸೀದ ಮಮ ಭಾಸ್ಕರ
ದಿವಾಕರ ನಮಸ್ತುಭ್ಯಂ
ಪ್ರಭಾಕರ ನಮೋಸ್ತುತೇ

ಹಾಗೂ-

ಧ್ಯಾಯೇತ್ ಸೂರ್ಯಮನಂತಕೋಟಿಕಿರಣಂ
ತೇಜೋಮಯಂ ಭಾಸ್ಕರಂ
ಭಕ್ತಾನಾಮ ಭಯಪ್ರದಂ ದಿನಕರಂ
ಜ್ಯೋತಿರ್ಮಯಂ ಶಂಕರಂ

ಮುಂತಾದ ಆದಿತ್ಯನ ಸ್ತೋತ್ರ ಮಂಜರಿಗಳನ್ನು ಪಠನಮಾಡಿ ಇಚ್ಚಿತ ಫಲಗಳು ಎಲ್ಲರೂ ಪಡೆಯುತ್ತಿದ್ದಾರೆ. ವ್ಯಾಸರು ರಚಿಸಿದ ನವಗ್ರಹ ಸ್ತೋತ್ರದ ಮೊದಲಿನ ಶ್ಲೋಕ--

ಜಪಾಕುಸುಮ ಸಂಕಾಶಂ
ಕಾಶ್ಯಪೇಯಂ ಮಹಾದ್ಯುತಿಂ
ತಮೋಽರಿಂ ಸರ್ವಪಾಪಘ್ನಂ
ಪ್ರಣತೋಸ್ಮಿದಿವಾಕರಮ್

ಇಂದಿಗೂ ನಿತ್ಯ ಸ್ಮರಣೀಯ ಸ್ತೋತ್ರರತ್ನ. ಅನುದಿನವೂ ಸೂರ್ಯನು ಮೇರುಪರ್ವತವನ್ನು ಪ್ರದಕ್ಷಿಣೆ ಮಾಡುವಾಗ ಹಗಲು ಇರಳು ಸಂಭವಿಸುತ್ತಿರುವಾಗ ಋತುಗಳ ಕಾರಣ ಕರ್ತೃವೂ ಕೂಡ ಸೂರ್ಯನೇ ಆಗಿದ್ದಾನೆ. ಸೂರ್ಯನ ಗತಿಯಿಂದ ಎಲ್ಲಾ ಋತುಗಳ ಆಗಮನವೆಂಬುವುದು ತಿಳಿದ ವಿಷಯವೇ, ಪ್ರಪಂಚಕ್ಕೆಲ್ಲಾ ಹಿತವನ್ನು ಕೊಡುವವನು ಸೂರ್ಯನು ಎಂಬುವುದಕ್ಕೆ ಪ್ರಮಾಣ ಹಾಗೂ ವೈಜ್ಞಾನಿಕ ಸಾಕ್ಷಿಗಳೂ ಕೂಡ ಹಲವಾರು.

ವೃಷ್ಟಿ ಮಾರುತ ಸಂತಾಪೈಃ
ಸುಖೈಃ ಸ್ಥಾವರ ಜಂಗಮಾನ್
ವರ್ಧಯನ್ ಸುಮಹಾತೇಜಾಃ
ಪುನಃ ಪ್ರತಿ ನಿವರ್ತತೇ
ಏವಮೇಷ ಚರನ್ ಪಾರ್ಥ
ಕಾಲಚಕ್ರಮತನ್ದ್ರಿತಃ
ಪ್ರಕರ್ಷನ್ ಸರ್ವಭೂತಾನಿ
ಸವಿತಾ ಪರಿವರ್ತತೇ

ಯಥೇಚ್ಚವಾದ ಮಳೆಯನ್ನು ಗಾಳಿಯನ್ನು ತಾಪವನ್ನೂ ನೀಡಿ ಜಗದ ಜನರ ಸುಖವನ್ನು ವೃದ್ಧಿಪಡಿಸುವ ಸಲುವಾಗಿಯೇ ತಾನು ನಿಯಮಿತ ಮಾರ್ಗದಲ್ಲಿ ಸಂಚರಿಸುತ್ತಾನೆ. ಸದಾಕಾಲದಲ್ಲಿ ಸರ್ವ ಪ್ರಾಣಿಗಳನ್ನು ತನ್ನ ಶಕ್ತಿಯಿಂದ ಪೋಷಿಸುವ ಸೂರ್ಯನು ಕಾಲ ಚಕ್ರವನ್ನು ಅನುಸರಿಸಿ ಸುತ್ತುತ್ತಿರುತ್ತಾನೆ ಎಂಬುವ ಮಹಾಭಾರತದ ನುಡಿಗಳು ನಿತ್ಯಸತ್ಯ. ಸಕಲ ಪ್ರಾಣಿಗಳ ಆಯುಷ್ಯವನ್ನು ಮತ್ತು ಕರ್ಮಗಳ ಫಲವನ್ನು ಕೊಡುವವನು ಸೂರ್ಯಭಗವಾನನೇ ಆಗಿದ್ದಾನೆ. ಮಂತ್ರಗಳ ಮಧುವಿದ್ಯೆಯನ್ನು ನೀಡುವವನೂ ಸೂರ್ಯನೇ, ಸೂರ್ಯನು ಎಲ್ಲರಿಗೂ ಸಂತೋಷಕಾರಣಾದ ಮಧುವಾಗಿದ್ದಾನೆ. ಬೃಹದಾರಣ್ಯಕದ "ಇಯಂ ಪೃಥಿವೀ ಸರ್ವೇಷಾಂ ಭೂತಾನಾಂ ಮಧು, ಅಸ್ಯೈ ಪೃಥಿವ್ಯೈ ಸರ್ವಾಣಿ ಭೂತಾನಿ ಮಧು ಅಯಮಾದಿತ್ಯಃ - ಅಯಂ ಧರ್ಮಃ ಇದಂ ಸತ್ಯಂ" ಎಂಬುವ ಮಂತ್ರವು ನಿತ್ಯ ಸ್ಮರಣೀಯ.



# ಆಚಾರ್ಯ ಮಧ್ವರು

(ಕಿರುಪರಿಚಯ - 1238 - 1317)

---ಎಸ್. ಕೆ. ಆಚಾರ್ಯ.

ಆಚಾರ್ಯ ಮಧ್ವರ ಜನ್ಮಕ್ಷೇತ್ರವಾದ ಪಾಜಕ ಕ್ಷೇತ್ರ ಹಾಗೂ ಕುಂಜಾರುಗಿರಿಯು ಉಡುಪಿಯಿಂದ ೧೧ ಕಿ.ಮೀ. ದೂರದಲ್ಲಿದೆ. ಕುಂಜಾರುಗಿರಿಯ ಮೇಲೆ ಪರಶುರಾಮ ಪ್ರತಿಷ್ಠಿತ ದುರ್ಗಾದೇವಿಯ ಮಂದಿರವಿದೆ. ದುರ್ಗಾಲಯದ ಪಕ್ಕದಲ್ಲಿ ಪರಶುರಾಮರ ದೇವಸ್ಥಾನ ಕೂಡಾ ಇದೆ.

ವಾದಿರಾಜರ ಅಭಿಪ್ರಾಯದಂತೆ ಪಾಜಕಕ್ಷೇತ್ರವು ಪರಮಪಾವನ ಕ್ಷೇತ್ರ. ಏಕೆಂದರೆ ಸತ್ಯಲೋಕಾಧಿಪತಿಯಾದ ಮುಖ್ಯಪ್ರಾಣರು, ಈ ಸುಂದರ ತಾಣದಲ್ಲಿ ಆಚಾರ್ಯ ಮಧ್ವರಾಗಿ ಜನ್ಮವೆತ್ತಿದ್ದಾರೆ. ಇಷ್ಟಲ್ಲದೆ ಪರಶು, ಧನು, ಬಾಣ ಹಾಗೂ ಗದಾತೀರ್ಥಗಳು, ಪಾಜಕ ಕ್ಷೇತ್ರದ ನೈಸರ್ಗಿಕ ಸೌಂದರ್ಯವನ್ನು ನಾಲ್ಮಡಿ ಹೆಚ್ಚಿಸಿವೆ. ಎಲ್ಲಕ್ಕೂ ಮಿಗಿಲಾಗಿ ಮಹಿಷಮರ್ಧಿನಿಯಾದ ದುರ್ಗಾಮಾತೆಯು, ಮಧ್ವಮುನಿಯಾಗಿ ಅವತರಿಸಿದ ತನ್ನ ಮಗ ಮುಖ್ಯ - ಪ್ರಾಣನ ಚಟುವಟಿಕೆಗಳನ್ನು ಕಂಡು, ಆಶೀರ್ವದಿಸಲಿಕ್ಕಾಗಿ ಇಲ್ಲೇ ನೆಲೆ ನಿಂತಿದ್ದಾಳೆ.

ದೇವಾಧಿದೇವನಾದ ಶ್ರೀಹರಿಯ ಸೇವೆಗಾಗಿ ಮುಖ್ಯಪ್ರಾಣನು, ಹನುಮ, ಭೀಮ, ಮಧ್ವರೆಂಬ ಮೂರು ಅವತಾರಗಳನ್ನೆತ್ತುವನು. ಮೊದಲು ಹನುಮನಾಗಿ ಅವತರಿಸಿ, ನೈಷ್ಠಿಕ ಬ್ರಹ್ಮಚರ್ಯ ವ್ರತವನ್ನು ಪಾಲಿಸಿ, ಶ್ರೀರಾಮಚಂದ್ರನನ್ನು ಅತ್ಯಂತ ಭಕ್ತಿಯಿಂದ ಸೇವಿಸಿ ಶ್ರೀರಾಮನ ಪೂರ್ಣಾನುಗ್ರಹಕ್ಕೆ ಪಾತ್ರನಾಗುತ್ತಾನೆ. ಎರಡನೇ ಬಾರಿ ಭೀಮನಾಗಿ ಅವತರಿಸಿ, ಶ್ರೀಕೃಷ್ಣ ಪ್ರಭುವಿನ ಆದೇಶದಂತೆ, ಬಕಾಸುರ, ಕೌರವ, ಜರಾಸಂಧಾದಿಗಳನ್ನು ನಿಗ್ರಹಿಸುತ್ತಾನೆ. ಮೂರನೆಯದಾಗಿ, ಶ್ರೀಹರಿಯ ಅಣತಿಯಂತೆ, ಯತಿರಾಜ ಮಧ್ವರಾಗಿ ಅವತಾರವೆತ್ತಿ, ಸರ್ವಮೂಲಗಳೆಂದೇ ಖ್ಯಾತಿವೆತ್ತ ೩೭ ಗ್ರಂಥಗಳನ್ನು ರಚಿಸಿ [illegible]ತಿಯ ಸಂಶಯಗಳನ್ನು ಪರಿಹರಿಸಿದ್ದಾರೆ. ನಾವು ಆಚಾರ್ಯ ಮಧ್ವರ ಜೀವನ ಹಾಗೂ ಕೃತಿಗಳನ್ನು ಅಧ್ಯಯನ ಮಾಡುವಲ್ಲಿ ಅಜ್ಞಾನವು ದೂರವಾಗಿ, ನಮ್ಮ ಬುದ್ಧಿಶಕ್ತಿಯು [illegible]ಕುಗೊಳ್ಳುವುದು.

## ಜನನ ಮತ್ತು ಬಾಲ್ಯ

ಆಚಾರ್ಯ ಮಧ್ವರು, ಮಧ್ಯಗೇಹಭಟ್ಟ ಹಾಗೂ ವೇದವತಿ ಎಂಬ ದಂಪತಿಗಳ, ಪುತ್ರನಾಗಿ, ವಿಜಯದಶಮಿಯ ಪವಿತ್ರ ದಿನದಂದು ಕ್ರಿ.ಶ. ೧೨೩೮ ರಲ್ಲಿ ಜನಿಸಿದರು. ಮಧ್ಯಗೇಹ ದಂಪತಿಗಳು, ಇಂತಹ ಸುಪುತ್ರನನ್ನು ಪಡೆಯಲು, ಉಡುಪಿಯ ಅನಂತೇಶ್ವರ ಸ್ವಾಮಿಯನ್ನು ಭಕ್ತಿಭರಿತರಾಗಿ ೧೨ ವರ್ಷಪರ್ಯಂತ ಸೇವೆಗೈದಿದ್ದರು. ಈ ವಿಚಾರವನ್ನು ಆಚಾರ್ಯ ಮಧ್ವರು, ಅವತಾರವೆತ್ತುವ ಅಲ್ಪಕಾಲದ ಹಿಂದೆ, ಆವೇಶಭರಿತನಾದ ವ್ಯಕ್ತಿಯೊಬ್ಬನು, ಅನಂತೇಶ್ವರ ಆಲಯದ ಧ್ವಜಸ್ತಂಭವನ್ನೇರಿ, "ಅಪಾರ ಬುದ್ಧಿಮತ್ತೆಯಿಂದ ಕೂಡಿದ, ಅಪ್ರತಿಮ ತತ್ವಜ್ಞಾನಿಯೊಬ್ಬನು ಜನಿಸಿ, ತತ್ವಶಾಸ್ತ್ರಗಳ ಯಥಾರ್ಥತೆಯನ್ನು ಪ್ರಪಂಚಕ್ಕೆ ನಿರೂಪಿಸಲಿದ್ದಾನೆ" ಎಂದು ಘೋಷಿಸುತ್ತಾನೆ. ಹೊಸ ಮಗುವಿಗೆ, ಹಿರಿಯರು ವಾಸುದೇವ ಎಂದು ನಾಮಕರಣ ಮಾಡುತ್ತಾರೆ. ತನ್ನ ಜನ್ಮಸ್ಥಳ ಹಾಗೂ ಬಾಲ್ಯದ ದಿನಗಳನ್ನು ಕಳೆದ ಪಾಜಕ ಕ್ಷೇತ್ರದಲ್ಲಿ ವಾಸುದೇವನು ಅನೇಕ ಸ್ಮಾರಕಗಳನ್ನು ನಿರ್ಮಿಸುವನು.

ಒಮ್ಮೆ ತಾಯಿ ವೇದವತಿಯು ಕರೆಯಲು, ಆಚಾರ್ಯರು ಕೂಡಲೇ ಹಾರಿ ಬಂದು ನಿಲ್ಲುವರು. ಅಲ್ಲಿ ಅವರ ಪಾದಚಿಹ್ನೆಗಳಿವೆ. ಈ ಸ್ಥಳದಲ್ಲಿ ವಾದಿರಾಜರು, ಮಧ್ವಾಚಾರ್ಯರನ್ನು ಅರ್ಚಿಸಲು ದೇವಳ ಒಂದನ್ನು ನಿರ್ಮಿಸುತ್ತಾರೆ. ಆಚಾರ್ಯರ ಹಿರಿಯರು ವಾಸಿಸುತ್ತಿದ್ದ ಮೂಡುಮಠವು ಈ ಆಲಯದ ಪಕ್ಕದಲ್ಲಿದೆ.

ವಾಸುದೇವನಿಗೆ ಅಕ್ಷರಾಭ್ಯಾಸ ಮಾಡಿಸಿದ ಕಲ್ಲನ್ನು ಇಂದು ಕೂಡಾ ನಾವು ಮೂಡು ಮಠದ ತುಳಸಿಕಟ್ಟೆಯ ಪಕ್ಕದಲ್ಲಿ ನೋಡಬಹುದು.



ಸನ್ಯಾಸದೀಕ್ಷೆ :-- ಅಚ್ಯುತ ಪ್ರೇಕ್ಷರೆಂಬ ಖ್ಯಾತ ನಾಮರಾದ ಪರಿವ್ರಾಜಕರು, ವಾಸುದೇವನಿಗೆ ಸನ್ಯಾಸ ದೀಕ್ಷೆಯನ್ನು ನೀಡಿ, ಅವರನ್ನು ಪೂರ್ಣಪ್ರಜ್ಞರೆಂದು ಕರೆಯುವರು. ಆಚಾರ್ಯ ಮಧ್ವರ ಜೀವನ ಚಿತ್ರಣ ಸುಮಧ್ವ ವಿಜಯದಲ್ಲಿ, ೧೦೦೮ ಶ್ಲೋಕಗಳಲ್ಲಿ ವರ್ಣಿಸಲ್ಪಟ್ಟಿದೆ.

ಆಚಾರ್ಯರ ಸರ್ವಮೂಲ ಗ್ರಂಥಗಳು :-- ಆಚಾರ್ಯ ಮಧ್ವರು ರಚಿಸಿದ ೩೭ ಸರ್ವಮೂಲ ಗ್ರಂಥಗಳು ಯಾವುದೆಂದರೆ - ೧) ಗೀತಾಭಾಷ್ಯ ೨) ಗೀತಾತಾತ್ಪರ್ಯ, ೩) ಬ್ರಹ್ಮಸೂತ್ರಭಾಷ್ಯ ೪) ಅಣುಭಾಷ್ಯ ೫) ಅಣುವ್ಯಾಖ್ಯಾನ, ೬) ನ್ಯಾಯ ವಿವರಣ, ೭) ಭಾಗವತ ತಾತ್ಪರ್ಯ, ೮) ಮಹಾಭಾರತ ತಾತ್ಪರ್ಯ ನಿರ್ಣಯ, ೯) ಪ್ರಮಾಣ ಲಕ್ಷಣ, ೧೦) ಕಥಾ ಲಕ್ಷಣ, ೧೧) ಉಪಾಧಿ ಖಂಡನ ೧೨) ಪ್ರಪಂಚ ಮಿಥ್ಯಾ ನು ಮಾನ ಖಂಡನ, ೧೩) ಮಾಯಾವಾದ ಖಂಡನ, ೧೪) ತತ್ವ ಸಂಖ್ಯಾನ, ೧೫) ತತ್ವವಿವೇಕ, ೧೬) ತತ್ವೋದ್ಯೋತ, ೧೭) ವಿಷ್ಣುತತ್ವ ನಿರ್ಣಯ, ೧೮) ಕರ್ಮ ನಿರ್ಣಯ ೧೯) ಈಶಾವಾಸ್ಯ ಉಪನಿಷದ್ ಭಾಷ್ಯ ೨೦) ಕಠೋಪನಿಷದ್ ಭಾಷ್ಯ ೨೧) ಕೇನ ಉಪನಿಷದ್ ಭಾಷ್ಯ ೨೨) ಮಂಡೂಕ ಉಪನಿಷದ್ ಭಾಷ್ಯ ೨೩) ಷಟ್ಪ್ರಸನ್ನ ಉಪನಿಷದ್ ಭಾಷ್ಯ ೨೪) ಮಂಡೂಕ್ಯ ಉಪನಿಷದ್ ಭಾಷ್ಯ ೨೫) ಐತ್ತರೇಯ ಉಪನಿಷದ್ ಭಾಷ್ಯ ೨೬) ತೈತ್ತರೀಯ ಉಪನಿಷದ್ ಭಾಷ್ಯ ೨೭) ಬೃಹದಾರಣ್ಯಕ ಉಪನಿಷದ್ ಭಾಷ್ಯ ೨೮) ಛಾಂದೋಗ್ಯ ಉಪನಿಷದ್ ಭಾಷ್ಯ ೨೯) ಋಗ್ವೇದ ಭಾಷ್ಯ ೩೦) ಯಮಕಭಾರತ, ೩೧) ನರಸಿಂಹನಖಸ್ತುತಿ, ೩೨) ದ್ವಾದಶಸ್ತೋತ್ರ, ೩೩) ಕೃಷ್ಣಾಮೃತ ಮಹಾರ್ಣವ ೩೪) ತಂತ್ರಸಾರ ಸಂಗ್ರಹ, ೩೫) ಸದಾಚಾರ ಸ್ಮೃತಿ, ೩೬) ಯತಿಪ್ರಣವಕಲ್ಪ, ೩೭) ಕೃಷ್ಣ ಜಯಂತಿ ನಿರ್ಣಯ.

ಮಧ್ವ ತತ್ವದ ಜೀವಾಳ :-- "ಹರಿಸರ್ವೋತ್ತಮ ವಾಯುಜೀವೋತ್ತಮ"ವೇ ಮಧ್ವಮತದ ಸಾರ ಸಂಗ್ರಹವಾಗಿದೆ. ದೇವೋತ್ತಮನಾದ ಶ್ರೀಹರಿಯೇ ಸರ್ವಶಕ್ತನು. ಜ್ಞಾನ, ಭಕ್ತಿ, ವೈರಾಗ್ಯಗಳೇ ಶ್ರೀಹರಿಯನ್ನು ಸೇರಲು ನಾವು ಕ್ರಮಿಸಬೇಕಾದ ಪ್ರಧಾನ ದಾರಿಗಳು. ಹರಿಕಥಾಶ್ರವಣವೇ, ವೈಕುಂಠಕ್ಕೆ ಪ್ರಮುಖ ಪಥ. ನಮ್ಮ ಪಾಲಿನ ಕರ್ತವ್ಯಗಳನ್ನು

ಚೆನ್ನಾಗಿ ಮಾಡಿ, ಅವುಗಳನ್ನು ದೇವರಿಗೆ ಅರ್ಪಿಸಬೇಕು. ಜನತಾ ಸೇವೆಯೇ ಜನಾರ್ದನ ಸೇವೆ ಎಂದು ಆಚಾರ್ಯರು ಅಪ್ಪಣೆ ಕೊಡಿಸಿದರು. ನಾವು ಸಮಾಜದ ಉತ್ಕರ್ಷಕ್ಕಾಗಿ, ನಿಸ್ವಾರ್ಥ ಸೇವೆ ಸಲ್ಲಿಸಬೇಕು. ಮಧ್ವ ಮತದ ಇನ್ನೊಂದು ಪ್ರಮುಖ ವೈಶಿಷ್ಟ್ಯವೆಂದರೆ, ಆಚಾರ್ಯರ ನಂತರ ಸನ್ಯಾಸ ಧೀಕ್ಷೆ ಕೈಗೊಂಡ ತಪೋಧನರಾದ ೧) ಜಯತೀರ್ಥರು, ೨) ವಿಜಯಧ್ವಜ ತೀರ್ಥರು, ೩) ಶ್ರೀಪಾದರಾಜರು, ೪) ವ್ಯಾಸರಾಜರು, ೫) ವಾದಿರಾಜರು, ೬) ರಘೂತ್ತಮತೀರ್ಥರು. ೭) ರಾಘವೇಂದ್ರ ತೀರ್ಥರು, ಆಚಾರ್ಯ ಮಧ್ವರು ಪ್ರಚುರಗೊಳಿಸಿದ ತತ್ವಗಳನ್ನು ಅಪ್ರತಿಮವಾಗಿ ತಮ್ಮ ಸ್ವಂತ ಕೃತಿ ಇಲ್ಲವೇ ಮಧ್ವರ ಕೃತಿಗಳಿಗೆ ತಾವು ಬರೆದ ಟಿಪ್ಪಣಿ ಗ್ರಂಥಗಳಲ್ಲಿ ಎತ್ತಿ ಹಿಡಿದಿದ್ದಾರೆ. ಪ್ರತಿಯೊಬ್ಬ ವ್ಯಕ್ತಿಯೂ ಸನ್ಯಾಸ ದೀಕ್ಷೆ ಕೈಗೊಳ್ಳುವಾಗ ಆಚಾರ್ಯರ ಯತಿ ಪ್ರಣವ ಕಲ್ಪದಲ್ಲಿ ವಿಧಿಸಿದಂತೆ ತಾನು ಹರಿಸರ್ವೋತ್ತಮ ತತ್ವವನ್ನು ಎತ್ತಿ ಹಿಡಿಯುವುದಾಗಿ ಪ್ರಮಾಣವಚನ ಮಾಡಬೇಕು.

ಗುರುದಕ್ಷಿಣೆ :-- ಲೋಕ ಗುರುಗಳಾದ ಆಚಾರ್ಯಮಧ್ವರು, ತಮ್ಮ ವಿದ್ಯಾಗುರುಗಳ ಋಣ ತೀರಿಸಲು ಕಾಪುವಿನಲ್ಲಿ ತಮ್ಮ ದಂಡವನ್ನು ನೆಲಕ್ಕೆ ತಿಕ್ಕಿ ದಂಡತೀರ್ಥವನ್ನು ನಿರ್ಮಿಸುತ್ತಾರೆ. ಇಂದಿಗೂ ಪರ್ಯಾಯ ಪೀಠಾರೋಹಣ ಮಾಡುವ ಶ್ರೀಗಳು ಅಲ್ಲಿ ಸ್ನಾನ ಮಾಡಿ, ಜೋಡುಕಟ್ಟೆಯಿಂದ ಪುರಪ್ರವೇಶ ಮಾಡಿ ಕನಕನ ಕಿಂಡಿಯಲ್ಲಿ ಕೃಷ್ಣದರ್ಶನ, ನವಗ್ರಹ ಪೂಜಾದಿಗಳನ್ನು ನೆರವೇರಿಸಿ, ಸರ್ವಜ್ಞಪೀಠವನ್ನೇರಬೇಕು. ಶ್ರೀ ಮುಷ್ಣದಲ್ಲಿ ಕೂಡಾ ಆಚಾರ್ಯರು ಇಂತಹವೇ ಒಂದು ಸರೋವರವನ್ನು ನಿರ್ಮಿಸಿರುತ್ತಾರೆ.

ಶ್ರೀಕೃಷ್ಣ ಪ್ರತಿಷ್ಠೆ :-- ಆಚಾರ್ಯ ಮಧ್ವರು ಶ್ರೀಕೃಷ್ಣನನ್ನು ಮಕರ ಸಂಕ್ರಾಂತಿಯ ಪವಿತ್ರ ಅವಸರದಲ್ಲಿ ಪ್ರತಿಷ್ಠಿಸಿದರು. ಮಲ್ಪೆಯಲ್ಲಿ ಬಿರುಗಾಳಿಗೆ ಸಿಲುಕಿದ ಹಡಗನ್ನು ಆಚಾರ್ಯರು ಸಂರಕ್ಷಿಸಿ ದಡ ಸೇರಿರುತ್ತಾರೆ. ಗೋಪಿ ಚಂದನದಿಂದ ಆವೃತ್ತನಾದ, ದ್ವಾರಕಾದಿಂದ ಬಂದ ರುಕ್ಮಿಣೀ ಕರಾರ್ಚಿತ ಶ್ರೀಕೃಷ್ಣನನ್ನು ದ್ವಾದಶಸ್ತೋತ್ರ ಹಾಡುತ್ತಾ ಮಧ್ವಸರೋವರದಲ್ಲಿ ಮುಳುಗಿಸಿ ಮಕರ ಸಂಕ್ರಾಂತಿಯಂದು ಪ್ರತಿಷ್ಠೆ ಮಾಡುತ್ತಾರೆ.

ಗೋಪಿ ಚಂದನ ಮಹಿಮೆ :-- ಗೋಪಿ ಚಂದನದಲ್ಲಿ ಆವೃತನಾಗಿ, ಶ್ರೀಕೃಷ್ಣನು ಉಡುಪಿಗೆ ಬಂದದ್ದರಿಂದ, ಸ್ನಾನಾನಂತರ ವೈಷ್ಣವರು, ಮುಖ್ಯವಾಗಿ ಮಾಧ್ವರು, ದ್ವಾದಶಪುಂಡ್ರ ನಾಮಗಳನ್ನು ಧರಿಸುತ್ತಾರೆ. ವಾದಿರಾಜರು ಗೋಪಿಚಂದನದ ಊರ್ಧ್ವನಾಮ, ವೈಷ್ಣವರ ಹಣೆಯಲ್ಲಿ ಬ್ರಹ್ಮನ ಬರಹವನ್ನು ಅಳಿಸಿ, ವೈಕುಂಠದ ಪಥದಂತೆ ಶೋಭಿಸುತ್ತದೆ ಎಂದಿದ್ದಾರೆ.

ಶ್ರೀಕೃಷ್ಣನ ನಿರಂತರ ಅರ್ಚನೆ :-- ಆಚಾರ್ಯ ಮಧ್ವರು ಶ್ರೀಕೃಷ್ಣನ ನಿರಂತರ ಅರ್ಚನೆಗಾಗಿ ಎಂಟು ಮಂದಿ ಬಾಲ ಸನ್ಯಾಸಿಗಳನ್ನು, ೨ ತಿಂಗಳಿಗೆ ಒಬ್ಬರು ಪರ್ಯಾಯ ಕ್ರಮದಲ್ಲಿ ನಿಯುಕ್ತಗೊಳಿಸುತ್ತಾರೆ. ಎಂಟು ಮಂದಿ ಶಿಷ್ಯರ ನಿತ್ಯಾರ್ಚನೆಗಾಗಿ ವಿಗ್ರಹಗಳನ್ನು ನೀಡುತ್ತಾರೆ. ಆ ವಿವರಗಳನ್ನು ಕೆಳಗೆ ನೀಡಿದೆ.

| ನಂ | ಮಠ | ಮೂಲಯತಿಗಳು | ಪಟ್ಟದ ದೇವರು |
|---|---|---|---|
| 1. | ಪಲಿಮಾರು ಮಠ | ಶ್ರೀ ಹೃಷಿಕೇಶ ತೀರ್ಥರು | ಶ್ರೀರಾಮ, ಸೀತಾ, ಲಕ್ಷ್ಮಣ |
| 2. | ಅದಮಾರು ಮಠ | ಶ್ರೀ ನರಸಿಂಹ ತೀರ್ಥರು | ಚತುರ್ಭುಜ ಕಾಲೀಯಮರ್ದನ ಕೃಷ್ಣ |
| 3. | ಕೃಷ್ಣಾಪುರ ಮಠ | ಶ್ರೀ ಜನಾರ್ದನತೀರ್ಥರು | ದ್ವಿಭುಜ ಕಾಲೀಯ ಮರ್ದನ ಕೃಷ್ಣ |
| 4. | ಪುತ್ತಿಗೆ ಮಠ | ಶ್ರೀ ಉಪೇಂದ್ರತೀರ್ಥರು | ಪಾಂಡುರಂಗ ವಿಠಲ |
| 5. | ಶಿರೂರು ಮಠ | ಶ್ರೀ ವಾಮನ ತೀರ್ಥರು | ಪಾಂಡುರಂಗ ವಿಠಲ |
| 6. | ಸೋದೆ ಮಠ | ಶ್ರೀ ವಿಷ್ಣುತೀರ್ಥರು | ವರಾಹಸ್ವಾಮಿ |
| 7. | ಕಾಣಿಯೂರು ಮಠ | ಶ್ರೀರಾಮತೀರ್ಥರು | ನರಸಿಂಹಸ್ವಾಮಿ |
| 8. | ಪೇಜಾವರ ಮಠ | ಅಧೋಕ್ಷಜ ತೀರ್ಥರು | ಪಾಂಡುರಂಗ ವಿಠಲ |

ಆಚಾರ್ಯ ಮಧ್ವರು ಶ್ರೀಕೃಷ್ಣನ ಅರ್ಚನೆಗಾಗಿ ಬಿಗಿಯಾದ ವಿಧಿವಿಧಾನಗಳನ್ನು ರೂಪಿಸಿದ್ದಾರೆ. ಅವೆಲ್ಲವೂ ಅಂದಿನಿಂದ ಇಂದಿನವರೆಗೆ ಆಚಾರ್ಯರು ವಿಧಿಸಿದಂತೆ ನಡೆದು ಬಂದಿವೆ. ಆದರೆ ಪೂಜಾ ಅವಧಿಯನ್ನು ಶ್ರೀ ವಾದಿರಾಜ ಸ್ವಾಮಿಗಳು (೧೪೮೦-೧೬೦೦) ೨ ತಿಂಗಳಿಂದ ೨ ವರ್ಷಗಳ ಪರ್ಯಂತ ವಿಸ್ತರಿಸಿದ್ದಾರೆ. ಏಕೆಂದರೆ, ಇದರಿಂದಾಗಿ ಪ್ರತಿಸ್ವಾಮಿಗಳಿಗೆ ಪರ್ಯಾಯ ಕಾಲದಲ್ಲಿ ಮಠದ ಆಡಳಿತದ ಹಾಗೂ ಇತರ ಅಭಿವೃದ್ಧಿಕಾರ್ಯ ಕೈಗೊಳ್ಳಲು ಮತ್ತು ಪರ್ಯಾಯದ ನಂತರ, ದೇಶಸಂಚಾರ, ಧರ್ಮಪ್ರಸಾರಕ್ಕಾಗಿ ಹೆಚ್ಚುವರಿ ಸಮಯ ಸಿಗುತ್ತದೆ.

ಶ್ರೀಕೃಷ್ಣ ಪ್ರಮುಖ ಪೂಜೆಗಳು :-- ಶ್ರೀಕೃಷ್ಣಮಠದಲ್ಲಿ ನಡೆಯುವ ದೈನಂದಿನ ಪ್ರಮುಖ ಪೂಜೆಗಳೆಂದರೆ 1) ನಿರ್ಮಾಲ್ಯ ವಿಸರ್ಜನ ಪೂಜೆ, 2) ಉಪಃಕಾಲಪೂಜೆ, 3) ಗೋಪೂಜೆ, 4) ಪಂಚಾಮೃತ ಪೂಜೆ, 5) ಉದ್ವರ್ತನ ಪೂಜೆ, 6) ಕಲಶ ಪೂಜೆ, 7) ತೀರ್ಥಪೂಜೆ, 8) ಅಲಂಕಾರ ಪೂಜೆ, 9) ಅವಸರ ಪೂಜೆ, 10) ಮಹಾಪೂಜೆ - ಈ ಪೂಜೆಗಳು, ಬೆಳಿಗ್ಗೆ 5-30 ರಿಂದ 11-30 ರ ವರೆಗೆ ಒಂದರ ಹಿಂದೆ ಒಂದರಂತೆ ನಡೆಯುತ್ತವೆ. ಸಾಯಂಕಾಲ 4-30 ರಿಂದ 5-30 ರ ವರೆಗೆ ಪುರಾಣ ವಾಚನ, 5-30 ರಿಂದ 7ರ ವರೆಗೆ ಪ್ರವಚನ ಕಾರ್ಯಕ್ರಮಗಳು ನಡೆಯುತ್ತವೆ. ಆ ಬಳಿಕ ರಾತ್ರಿ 7-00 ರಿಂದ 9-00 ರ ವರೆಗೆ ನಡೆಯುವ ಪೂಜೆಗಳೆಂದರೆ--

1) ಚಾಮರ ಸೇವೆ, 2) ರಾತ್ರಿ ಪೂಜೆ, 3) ಮುಖ್ಯಪ್ರಾಣನಿಗೆ ರಂಗಪೂಜೆ, 4) ರಥೋತ್ಸವ ಕಾಲದಲ್ಲಿ ಕಾಲಾದೀ ಸೇವಾರ್ಥ ರಥೋತ್ಸವ, 5) ತೊಟ್ಟಿಲ ಪೂಜೆ, 6) ಅಷ್ಟಾವಧಾನ, 7) ಕೊಳಲು ಸೇವೆ, 8) ಶಯನೋತ್ಸವ.

ಈ ಎಲ್ಲಾ ಪೂಜೆಗಳು ಅಭಾದಿತವಾಗಿ, ಪರ್ಯಾಯ ಕ್ರಮದಲ್ಲಿ ಆಚಾರ್ಯ ಮಧ್ವರ, ವಾದಿರಾಜರ ಸಂಕಲ್ಪದಂತೆ ಕಳೆದ 8 ಶತಮಾನಗಳಿಂದ ಉಡುಪಿಯ ಅಷ್ಟಮಠದ ಯತಿಗಳಿಂದ ನಿರಂತರ ನಡೆದುಕೊಂಡು ಬಂದಿದೆ. ಆದರೆ ಮಧ್ಯಾಹ್ನದ ಪ್ರಮುಖ ಪೂಜೆಯಾದ ಮಹಾಪೂಜೆ ಹಾಗೂ ರಾತ್ರಿಯ ಚಾಮರ ಪೂಜೆಯನ್ನು ಪರ್ಯಾಯ ಪೀಠಸ್ಥರಾದ ಸ್ವಾಮಿಗಳೇ ಮಾಡಬೇಕು. ಉಳಿದೆಲ್ಲಾ ಪೂಜೆಗಳನ್ನು ಅಷ್ಟಮಠದ ಇತರ ಯತಿಗಳು, ಪರ್ಯಾಯ ಶ್ರೀಗಳಿಗೆ ಸಹಾಯಕರಾಗಿ ಮಾಡಬಹುದು.

ತಮಗೆ ದೇವರು ನಿಯುಕ್ತಗೊಳಿಸಿದ ಎಲ್ಲಾ ಕೆಲಸಗಳು ಮುಗಿದ ಬಳಿಕ ಆಚಾರ್ಯಮಧ್ವರು ಐತ್ತರೇಯ ಉಪನಿಷತ್ತನ್ನು ಅನಂತೇಶ್ವರದಲ್ಲಿ ತನ್ನ ಶಿಷ್ಯರಿಗೆ ಬೋಧಿಸುತ್ತಿರುವಾಗಲೇ ಕ್ರಿ.ಶ. 1317 ರಲ್ಲಿ ತನ್ನ 79 ನೆಯ ವಯಸ್ಸಿನಲ್ಲಿ ಮಾಘ ಶುದ್ಧ ನವಮಿಯಂದು, ಅದೃಶ್ಯರಾಗಿ ಬದರಿಗೆ ತೆರಳುತ್ತಾರೆ. ಇಂದಿಗೂ ಆಚಾರ್ಯ ಮಧ್ವರು, ಅದೃಶ್ಯರಾಗಿ ಪರ್ಯಾಯ ಶ್ರೀಗಳ ಮೂಲಕ ಶ್ರೀಕೃಷ್ಣನನ್ನೂ, ದೃಶ್ಯರಾಗಿ ಉತ್ತರ ಬದರಿಯಲ್ಲಿ ವೇದವ್ಯಾಸರನ್ನೂ ಅರ್ಚಿಸುತ್ತಿರುವರೆಂಬ ಪ್ರಬಲ ನಂಬಿಕೆಯೊಂದಿದೆ.



# ಪುರಂದರ ದಾಸರು

---ವಿದ್ವಾನ್ ಹೆಚ್. ಶ್ರೀನಿವಾಸಲು.

ನಮಗೆ ಉತ್ತರಾಯಣ ಪುಣ್ಯಕಾಲ (ಸಂಕ್ರಾಂತಿ) ಹಬ್ಬ ಬಂತೆಂದರೆ ಎಲ್ಲಿಲ್ಲದ ಸಂತೋಷ ಸಡಗರ ಈ ತಿಂಗಳಲ್ಲಿ ಪುರಂದರದಾಸರ ಪುಣ್ಯತಿಥಿ ಜೊತೆಗೆ ವಿವೇಕಾನಂದ ಹಾಗೂ ಸದ್ಗುರು ತ್ಯಾಗರಾಜರ ಪುಣ್ಯ ತಿಥಿಗಳೂ ಸಹ ಬರುತ್ತವೆ. ಈ ಮಹನೀಯರೆಲ್ಲಾ ನಮ್ಮಂತೆಯೇ ಜನ್ಮತಾಳಿ ಸಾಧನೆಯ ಮೂಲಕ ಭಗವಂತನ ಸಾಕ್ಷಾತ್ಕಾರಪಡೆದು ಕೃತಾರ್ಥರಾದವರು.

ಸಾಧನೆ ಮಾಡಿದವರಿಗೆ ಎಲ್ಲವೂ ಸುಲಭವೇ. ಈ ಧರೆಯನ್ನು ಆಳಿದ ಎಷ್ಟೋ ಮಂದಿ ಅರಸರ ಹೆಸರು ಅಳಿಸಿಹೋಗಿದೆ, ಆದರೆ ಮಹಾತ್ಮರ ಹೆಸರುಗಳು ಇನ್ನೂ ಉಳಿದಿವೆ. ಇದಕ್ಕೆ ಸಾಕ್ಷಿ ಇವರು ಮಾಡಿರುವ ಸತ್ಕಾರ್ಯ.

ಪುರಂದರದಾಸರ ಪೂರ್ವದ ಹೆಸರು ಶ್ರೀನಿವಾಸನಾಯಕ. ಇವರು ಪುರಂದರಗಡಕ್ಕೆ ಈಗಿನ ಮಹಾರಾಷ್ಟ್ರಕ್ಕೆ- ಸೇರಿದವರು. ಇವರು ಕಾಲ ಕ್ರಿ.ಶ. ೧೪೮೦-೧೫೬೪. ಇವರ ಸತೀಮಣಿ ಸರಸ್ವತಿ ಬಾಯಿ ಹಾಗೂ ಮೂವರು ಗಂಡುಮಕ್ಕಳು (೧) ಲಕ್ಷ್ಮಣದಾಸ (೨) ಹೇಬಣದಾಸ (೩) ಮಧ್ವಪದಾಸ ಇವರ ವೃತ್ತಿ ವ್ಯಾಪಾರ. ಆಗಲೇ ಇವರನ್ನು ಜನರು "ಜಿಪುಣ ಚಕ್ರವರ್ತಿ" ಎಂದು ಕರೆಯುತ್ತಿದ್ದರು.

ಯಾರಿಗೆ ಏನಾದರೂ ಲಭ್ಯವಾಗಬೇಕಾದರೆ ಒಂದು ಮಹತ್ತರವಾದ ಘಟನೆ ನಡೆಯಲೇಬೇಕು. ಒಂದು ದಿನ ಶ್ರೀಹರಿಯೇ ಮಾರುವೇಶದಲ್ಲಿ ಬಂದು ಸರಸ್ವತಿಬಾಯಿಯನ್ನು ದಾನ ಕೇಳಿದಾಗ ಆಕೆ ತನ್ನ ಮೂಗುತಿಯನ್ನು ದಾನವಾಗಿ ಕೊಟ್ಟಳು. ಆತ ಅದನ್ನು ಆಕೆಯ ಗಂಡನ ಅಂಗಡಿಗೇ ತೆಗೆದುಕೊಂಡು ಹೋದನು. ಅದನ್ನು ಕಂಡ ನಾಯಕನಿಗೆ ಆಶ್ಚರ್ಯವಾಗಿ ಇದು ತನ್ನ ಹೆಂಡತಿಯದೆಂದು ಗುರ್ತಿಸಿ ನೇರವಾಗಿ ತನ್ನ ಮನೆಗೆ ಬಂದನು. ಅತ್ಯಂತ ಕೋಪದಿಂದ ಮೂಗುತಿ ಎಲ್ಲಿ ತಂದುಕೊಡು ಎಂದು ತನ್ನ ಸತಿಯನ್ನು ಕೇಳಿದನು. ದಿಕ್ಕುತೋಚದೆ ಆಕೆ ಭಗವಂತನನ್ನು ಬೇಡಿದಳು. ಅಸಹಾಯಕಳಾಗಿ ವಿಷಕುಡಿಯಲು ಹೋದಾಗ ಆ ಬಟ್ಟಲಲ್ಲೇ ಮೂಗುತಿ ಕಂಡಳು, ತಕ್ಷಣ ಅದನ್ನು ಗಂಡನಿಗೆ ಕೊಟ್ಟಳು. ತನ್ನ ಪೆಟ್ಟಿಗೆಯಲ್ಲಿದ್ದ ಮೂಗುತಿ ಮಾಯವಾಗಿತ್ತು. ಆತನು ಇದನ್ನು ಪವಾಡವೆಂದೇ ತಿಳಿದನು. ಈ ಘಟನೆ ಆತನ ಜೀವನದಲ್ಲಿ ತಿರುವಿಗೆ ಕಾರಣವಾಯ್ತು. ಕೂಡಲೇ ಜ್ಞಾನೋದಯವಾಗಿ ತನ್ನಲ್ಲಿಗೆ ಬಂದ ಸದ್‌ಬ್ರಾಹ್ಮಣನನ್ನು ಭಗವಂತನೆಂದು ನಿರ್ಧರಿಸಿದನು. ತಾನು ವಿರಕ್ತನಾಗಿ ಸರ್ವಸ್ವವನ್ನು ತ್ಯಾಗಮಾಡಿದನು. ಆತನಲ್ಲಿ "ನವಕೋಟಿ" (ಒಂಬತ್ತು) ಕೋಟಿ ಹಣವಿತ್ತೆಂದು ಅನೇಕರು ಅಭಿಪ್ರಾಯಪಟ್ಟಿದ್ದಾರೆ. ಈಗಲೂ ಅವರು ರಚಿಸಿದ 4,75,000 ದೇವರ ನಾಮಗಳಲ್ಲಿ "ನವರತ್ನಮಾಲಿಕೆ" ಪ್ರಖ್ಯಾತಿಗೆ ಬಂದಿದೆ. ಉದಾ :- ಕೆರೆಯ ನೀರನು ಕೆರೆಗೆ ಚೆಲ್ಲಿರೋ - ಅರ್ಥಾತ್ ಭಗವಂತನು ನಮಗೆ ಕೊಟ್ಟಿದ್ದನ್ನು ಅವನಿಗೆ ಅರ್ಪಿಸಿ ನಮ್ಮ ಜನ್ಮಸಾರ್ಥಕ ಪಡಿಸಿಕೊಳ್ಳಿ ಎಂದಿದ್ದಾರೆ.

ಇವರು ದೈವಾಂಶ ಸಂಭೂತರೆಂದು ವಿಜಯದಾಸರು ಹೇಳಿದ್ದಾರೆ. ಇವರು ರಚಿಸಿದ ದೇವರ ನಾಮಗಳ ಆಧಾರದಿಂದಲೇ ಸಂಗೀತ ಪಿತಾಮಹ ಎಂದು ಕರೆದಿದ್ದಾರೆ. ಸದ್ಗುರು ತ್ಯಾಗರಾಜರು ಹೇಳಿರುವಂತೆ "ದುರಿತವ್ರಾತಮುಲೆಲ್ಲ ಬರಿಮಾರ್ಚೆಡಿ ಹರಿಗುಣಮುಲ ಬಾಡುಚುನೆಪುಡನ್ ಬರವಶುಡ್ಯೆವೆಲಯು ಪುರಂದರದಾಸುನಿ ಮಹಿಮಲನು ದಲಚೆದ ಮದಿಲೋನ್" (ಪ್ರಹ್ಲಾದ ಭಕ್ತವಿಜಯಂ) ಸಂಗೀತ ಸಾರಾಮೃತ ಎಂಡು ತುಳಜಾಜಿ ರಚಿಸಿದರು ಮತ್ತು ಸಂಗೀತ ಸಂಪ್ರದಾಯಕ ಪ್ರದರ್ಶಿನಿ ಎಂದು ಸುಬ್ಬರಾಮ ದೀಕ್ಷಿತರು ಬರೆದಿದ್ದಾರೆ. ಇವರ ಕೀರ್ತನೆಗಳಲ್ಲಿ ಪಲ್ಲವಿಗೆ ಪೋಷಕವಾಗಿ ಕಂಡುಬರುವ ಅನುಪಲ್ಲವಿ ಹೆಸರೇ ಸೂಚಿಸುವಂತೆ ಉಪಪ್ರಧಾನವಾದುದು ಮತ್ತು ಐಚ್ಛಿಕವಾದುದು. ಒಟ್ಟಿ ಕೀರ್ತನೆಗಳು ಏಕೈಕ ಭಾವನೆ ಹೊಂದಿದ್ದು ಕೊನೆಯ ಚರಣಗಳಲ್ಲಿ ಅಂಕಿತ ಕಂಡುಬಂದರೆ ಒಂದೊಂದು ನುಡಿಯಲ್ಲೂ ವಿಷಯದ ಮಹತ್ತಿದೆ. ಇವರ ಶೈಲಿ ಅತ್ಯಂತ ಸರಳ, ಹಾಡಲು ಸುಲಭವಾಗಿದೆ. ಅಕ್ಷರಾಭ್ಯಾಸವಿಲ್ಲದವರಿಗೂ ಸಹ ಮಕ್ಕಳಿಂದ ವೃದ್ಧರವರೆಗೂ ಹಾಡಬಹುದು ಉದಾ - ಭಾಗ್ಯದ ಲಕ್ಷ್ಮಿ ಬಾರಮ್ಮಾ...... ಬಹು ಜನಪ್ರಿಯವಾದದ್ದು.

ದೇವರನಾಮ :- ಸರ್ವಜ್ಞ ವಚನಗಳಿಗೆ ಪ್ರಖ್ಯಾತವಾದಂತೆ, ಪುರಂದರದಾಸರು ದೇವರನಾಮಗಳನ್ನು ರಚಿಸಿದ ಕಾರಣ ಅವರ ಹೆಸರು ಅಮರವಾಗಿದೆ. ಅವರು ಗಜವದನ ಬೇಡುವೆ ಎಂದು ಮೊದಲ್ಗೊಂಡು ಎಲ್ಲಾ ದೇವರ ಬಗ್ಗೆ ಕೀರ್ತನೆಗಳ ರಚನೆ ಮಾಡಿರುವುದು ಒಂದು ವೈಶಿಷ್ಟ್ಯ. ಆಡು ಮುಟ್ಟದ ಸೊಪ್ಪಿಲ್ಲ ಎಂಬಂತೆ ದಾಸರು ಕೊಂಡಾಡದ ವಿಷಯವಿಲ್ಲ ಎಂದರೆ ತಪ್ಪಾಗಲಾರದು. ಪ್ರಾಯಶಃ ಇವರಿಗೆ ಈ ಕಾರಣಕ್ಕಾಗಿಯೇ "ದಾಸರೆಂದರೆ ಪುರಂದರದಾಸರಯ್ಯ" ಹಾಗೂ "ಕರ್ನಾಟಕ ಸಂಗೀತ ಪಿತಾಮಹ" ಎಂಬ ಹೆಸರು ನೀಡಲಾಗಿದೆ.

ಆಧುನಿಕ ಕಾಲದಲ್ಲಿ ಮನುಷ್ಯ ಯಜ್ಞ ಯಾಗಗಳನ್ನು ಹಾಗೂ ತಪಸ್ಸು ಮಾಡದೆ ಸುಲಭೋಪಾಯದಲ್ಲಿ ಮೋಕ್ಷದ ಹಾದಿಯನ್ನು ಸುಮಾರು ಐದು ಶತಮಾನಗಳ ಹಿಂದೆಯೇ ದಾರಿ ತೋರಿಸಿಕೊಟ್ಟಿದ್ದಾರೆ. ಕಬೀರದಾಸರು ನುಡಿದಂತೆ ಜಾತ್ ನ ಪೂಚೋ ಸಾಧು ಕೋ ಪೂಚ್‌ಲೀಜೀಯೇ ಗ್ಯಾನ್ ಅರ್ಥಾತ್ ಸಾಧುವಿನ ಗುಣ ಕೇಳಿರಿ ಜಾತಿ ಅಲ್ಲ ಎಂಬಂತೆ ದಾಸರೂ ಸಹ ಹಸು ಕಪ್ಪಾದರೆ ಅದರ ಕ್ಷೀರ ಕಪ್ಪೇ ಎಂದು ಸಾರಿದ್ದಾರೆ. ವಿವೇಕಾನಂದರಂತೆ ಇವರೂ ಸಹ ವಿಶ್ವಭ್ರಾತೃತ್ವಕ್ಕೆ ಕಂಕಣ ಕಟ್ಟಿಕೊಂಡರು. ಇಹಕ್ಕೂ ಪರಕ್ಕೂ ನವವಿಧಭಕ್ತಿಯ ವಿಧಾನದ ಮೂಲಕ, ಕೇವಲ ಧ್ಯಾನದಿಂದಲೇ ಸೇತುವೆ ಕಟ್ಟಿ, ಮಾತ್ರ ಗುರು ಕರುಣೆ ಪಡೆದು ಮೋಕ್ಷ ಪಡೆಯುವ ಸುಲಭೋಪಾಯ ತಿಳಿಸಿದ್ದಾರೆ.

ಧ್ಯಾನಕ್ಕೆ ವೇಳೆ ಇಲ್ಲ ಎಂದು ಇಂದಿನ ವೇಳೆ ಶುಭವೇಳೆ ಇಂದಿನವಾರ ಶುಭವಾರ ಇಂದಿನ ಘಳಿಗೆ ಶುಭಘಳಿಗೆ ಎಂದಿದ್ದಾರೆ. ಇವರು ಭಕ್ತಿಗೆ ಬಲಿಯಾಗದ ದೇವರಿಲ್ಲ ಎಂದು ಸಾಬೀತುಮಾಡಿದ್ದಾರೆ. ಇವರ ರಚನೆಯನ್ನು ವಿದ್ವಾಂಸರು "ಪುರಂದರೋಪನಿಷತ್" ಎಂದು ಕರೆದಿದ್ದಾರೆ.

ತಾನು ಇಹದಲ್ಲಿ ವ್ಯಾಪಾರಿಯಾಗಿದ್ದು ನಂತರ ಸರ್ವಸಂಗ ಪರಿತ್ಯಾಗಿಯಾಗಿ ತನಗೂ ದೇವರಿಗೂ ವ್ಯಾಪಾರವಿಟ್ಟುಕೊಂಡರು. ನಿನ್ನಂಥ ತಂದೆಯೆನಗುಂಟು ನಿನಗಿಲ್ಲ - ಎಂದರೆ ಎಂತಹ, ದೃಢವಾದಂತಹ ನಂಬಿಕೆ.

ತುಳಸೀದಾಸರು ಹೇಳಿದಂತೆ ಶ್ರೀರಾಮನಿಗಿಂತ ರಾಮಭಕ್ತ ಹಿರಿಯನು ಎಂದಿದ್ದಾರೆ. ಪುರಂದರದಾಸರೂ ಸಹ "ನೀನ್ಯಾಕೊ ನಿನ್ನ ಹಂಗ್ಯಾಕೊ ನಿನ್ನ

## ಶ್ರೀ ವೆಂಕಟೇಶ್ವರ ಕೇಂದ್ರ ಗ್ರಂಥಾಲಯ
## ಸಂಶೋಧನ ಕೇಂದ್ರ -- ತಿರುಪತಿ

# ಒಂದು ವಿನಂತಿ

1993 ರಲ್ಲಿ ತಿ.ತಿ.ದೇ. ಆಡಳಿತ ಮಂಡಳಿಯ ವಜ್ರಮಹೋತ್ಸವ ವರ್ಷದಲ್ಲಿ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ, ಸಂಶೋಧನ ಕೇಂದ್ರವನ್ನು ನೆಲೆಗೊಳಿಸಿ ಅದನ್ನು ಸ್ವಾಮಿ ಭಕ್ತರ ಸೇವೆಯಲ್ಲಿ ಸಮರ್ಪಿಸಲಾಯಿತು. ನಮ್ಮ ಪರಂಪರೆಯ ವಾಸ್ತುಶಿಲ್ಪದ ಹಾಗೂ, ಆಧುನಿಕ ವಾಸ್ತುಶಾಸ್ತ್ರದ ಉತ್ತಮಾಂಶಗಳನ್ನು ಒಳಗೊಂಡು ನಿಂತಿರುವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕಾಗಾರವಾಗಿ ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀತೆಗಳ ಉಪಾದೇಯವೂ ಭವ್ಯವೂ ಆದ ಸಂದೇಶವನ್ನು ಪ್ರಸಾರ ಮಾಡುವ ಉದ್ದೇಶ ಹೊಂದಿದೆ.

ಸನಾತನ ಧರ್ಮದ ವೈವಿಧ್ಯಮಯ ಮುಖಗಳ, ಭಾರತೀಯ ಚಿಂತನಶೀಲತೆಯ, ತತ್ವ, ಧರ್ಮ, ಸಂಗೀತವೇ ಮೊದಲಾದ ಪರಂಪರಾಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಕಲ್ಪಿಸುವುದು. ಭಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ ಆದ ಅಂಶಗಳನ್ನು ಪ್ರಕಟಿಸುವುದೂ, ಸಂಸ್ಕೃತಪಾಠಗಳ ಮೂಲ ಪ್ರತಿಗಳನ್ನೂ ಅವುಗಳ ಸರಳಾನುವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ. ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯವಾಗಿ, ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ. ಇಡೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ.

ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದಲ್ಲಿಯಾಗಲೀ ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ.

ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು.

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹಣವಾಗಲೀ ಕಳುಹಿಸಬೇಕಾದ ವಿಳಾಸ -- ವಿಶೇಷಾಧಿಕಾರಿ, ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಹಾಗೂ ಸಂಶೋಧನ ಕೇಂದ್ರ -- ತಿರುಪತಿ -- 517 502.

ಸಾಮದ ಬಲ ಒಂದಿದ್ದರೆ ಸಾಕೋ" ಎಂದಿದ್ದಾರೆ. ನವರಸಗಳ ವರ್ಣನೆಯನ್ನೂ ಸೊಗಸಾಗ್ಗಿ ರಚಿಸಿದ್ದಾರೆ. ಉದಾ :- ಹಾಸ್ಯಕ್ಕಾಗಿ "ನಗೆಯು ಬ ರುತಿದೆ ಎನಗೆ ನಗೆಯು ಬರುತಿದೆ ಜಗದೊಳಿರುವ ಮನುಜರೆಲ್ಲ ಹಗರಣವ ಮಾಡುವುದನ ಕಂಡು" ಎಂದಿದ್ದಾರೆ. ಆರು ಹಿತವರು ನಿನಗೆ ಈ ಮೂವರೊಳಗೆ ನಾರಿಯೋ, ಧಾರುಣಿಯೋ, ಸಿರಿಯೋ? ಇವುಗಳಲ್ಲಿ ಒಂದನ್ನು ನಾವೇ ಅರಿಸಿಕೊಳ್ಳಬೇಕು; ಎಂದು ಸಾರಿದ್ದಾರೆ.

ದಾಸರು ಜಗತ್ತಿನ ಎಲ್ಲಾ ವ್ಯವಹಾರಗಳಿಗೆ "ಈಸಬೇಕು ಇದ್ದು ಜಯಿಸಬೇಕು" ಎಂದು ಸಾರಿದ್ದಾರೆ. ಅವರ ಕೊಡುಗೆ ಸಂಗೀತಕ್ಕೆ ಎಷ್ಟು ಕೊಂಡಾಡಿದರೂ ಸಾಲದು. ಪ್ರಾಯಶಃ ಸಂಗೀತ ಸಾಮವೇದದ ಒಂದು ಅಂಗವೆಂದು ಸಾಬೀತು ಮಾಡಿದ್ದಾರೆ. ಇಂತಹ ಅಪಾರವಾದಂತಹ ಕೊಡುಗೆಯನ್ನು ಗುರ್ತಿಸಿ ವಿದ್ವಾಂಸರು ಸಂಗೀತ ಪಂಚಮ ವೇದ ಎಂದು ಕರೆದಿದ್ದಾರೆ, ಕೆಲವರು ನಾರದರ ಅವತಾರವೆಂತಲೂ ಕರೆದಿದ್ದಾರೆ. ಪ್ರಸ್ತುತ ಪುರಂದರ ಪ್ರಶಸ್ತಿ ವರ್ಷಕ್ಕೊಮ್ಮೆ ಒಬ್ಬ ಸಂಗೀತ ವಿದ್ವಾಂಸರಿಗೆ ನೀಡಲಾಗುತ್ತಿದೆ.

ಕೊನೆಯದಾಗಿ ಅವರೇ ನುಡಿದಂತೆ ಹರಿದಾಸನಾಗಲು ಏಸು ಜನ್ಮದ ಫಲಬೇಕು ಗಾನದ ಬಲದಿಂದ ಮನಸ್ಸು ಪರಿಪಕ್ವಗೊಂಡು ಪಾರಮಾರ್ಥಿಕ ಅನುಭವ ಆಗುವುದೆಂದು ಸಾರಿದ್ದಾರೆ. ಜೊತೆಗೆ ಪ್ರತಿಯೊಂದು ಚರಣದಲ್ಲಿಯೂ ಬಹಳ ಸೊಗಸಾಗಿ ಚಿತ್ರಿಸಿದ್ದಾರೆ. ಅವರ ಧ್ಯೇಯ ಯತೋಧರ್ಮಃ ತತೋ ಜಯಃ ಅರ್ಥಾತ್ ಧರ್ಮವೆ ಜಯವೆಂಬ ದಿವ್ಯಮಂತ್ರ ಧರೆಯಲ್ಲಿ ಧರ್ಮ ಶಾಶ್ವತವಾಗಿರಲಿ ಎಂದು ಅಪೇಕ್ಷೆ ಪಟ್ಟಿದ್ದಾರೆ ಆರಂಭದಲ್ಲಿ ಲೌಕಿಕ ಜೀವನ ಆದರೂ ಅರ್ಧದ ನಂತರ ಅಲೌಕಿಕ ಜೀವನದಲ್ಲಿ ಕಾಲೂರಿ ನಿಂತು ಕೃತಾರ್ಥರಾದ ಮಹನೀಯರಿವರು.

"ಉದಾರ ಚರಿತಾನಾಂ ತು ವಸುಧೈವ ಕುಟುಂಬಕಂ" ಇಹದಲ್ಲಿ ಧರ್ಮಪರಕಾರ್ಯಗಳು ಸದಾ ನಡೆಯುತ್ತಿವೆ ಎನ್ನುವುದಕ್ಕೆ ಸಾಕ್ಷಿ ಏನೆಂದರೆ ವಿಶ್ವವೇ ಒಂದು ಕುಟುಂಬ. ಕೀರ್ತನೆಗಳನ್ನು ರಚಿಸಿ ದೈವಕೃಪೆಗೆ ಪಾತ್ರರಾಗಿ ಇಂಥ ಉತ್ತಮೋತ್ತಮ ಸಾತ್ವಿಕ ಗುಣವನ್ನು ಸಾಧಿಸಿ ಸಿದ್ಧಿಯನ್ನು ಪಡೆದರು.

"ಜ್ಞಾನ ಭಕ್ತಿ, ವೈರಾಗ್ಯ ಸಂಪನ್ನಂ, ಭಕ್ತಿಮಾರ್ಗಪ್ರದರ್ಶಕಂ ಪುರಂದರಂ ಗುರುಂ ವಂದೇ ದಾಸ ಶ್ರೇಷ್ಠಂ ದಯಾನಿಧಿಂ"

ಇಂತಹ ಪ್ರಶಸ್ತಿ ಇವರಿಗೇ ಅನ್ವಯಿಸುವುದು.

ಓಂ ತತ್ ಸತ್



# ದಾಸರಲ್ಲಿ ಭಕ್ತಿ

-- ಕೃಷ್ಣ ಹುನಗುಂದ.

ಪುಣ್ಯಭೂಮಿ ಭಾರತದಲ್ಲಿ ಕರ್ನಾಟಕವು - ಸಾಧುಸಂತರ, ದಾರ್ಶನಿಕರ, ನೆಲೆವೀಡಾಗಿದೆ. ಒಂದೆಡೆ ವಚನಕಾರರು, ಮತ್ತೊಂದೆಡೆ ಹರಿದಾಸರೂ ಇಲ್ಲಿಯ ನೆಲವನ್ನು ಸಂಸ್ಕೃತಿಯನ್ನೂ ಪಾವನಗೊಳಿಸಿದ್ದಾರೆ. ಧಾರ್ಮಿಕ, ಆಧ್ಯಾತ್ಮಿಕ ತಿಳುವಳಿಕೆಯ ಜತೆಗೇ ಸಾಹಿತ್ಯವನ್ನೂ ಉಳಿಸಿ ಬೆಳೆಸಿದ್ದಾರೆ. ಅಂಥಹ ಮಹನೀಯರುಗಳಲ್ಲಿ ಹರಿದಾಸ ಸಾರ್ವಭೌಮರಾದ ದಾಸರೂ ಒಬ್ಬರು. ಈ ಪುರಂದರದಾಸರು ಸುಮಾರು 4 ಲಕ್ಷ 75 ಸಾವಿರ ಕೃತಿಗಳನ್ನು ರಚಿಸಿ, ಹರಿದಾಸಸಾಹಿತ್ಯ. ತನ್ಮೂಲಕ ಕನ್ನಡಸಾಹಿತ್ಯವನ್ನೂ ಬೆಳಗಿಸಿದ ಪ್ರಾತಃಸ್ಮರಣೀಯರು. ಪ್ರಸ್ತುತ ಶ್ರೀ ಪುರಂದರದಾಸರ ಪುಣ್ಯತಿಥಿಯ ಸಂದರ್ಭದಲ್ಲಿ, ದಾಸರಾಯರು ಸಾಹಿತ್ಯದಲ್ಲಿ ಭಕ್ತಿಯ ಪ್ರತಿಪಾದನೆ ಹೇಗೆ ಮಾಡಿದ್ದಾರೆ ಎಂದು ವಿವೇಚಿಸಲಾಗಿದೆ.

ಭಕ್ತಿ ಎಂದರೇನು ? ಎಲ್ಲ ದಾರ್ಶನಿಕರಿಗಿಂತ ಈ ಬಗ್ಗೆ ವ್ಯಾಖ್ಯೆಯನ್ನು ಶ್ರೀಮನ್‌ಮಧ್ವಾಚಾರ್ಯರು ತಮ್ಮ "ಶ್ರೀ ಮಹಾಭಾರತ ತಾತ್ಪರ್ಯ ನಿರ್ಣಯ" ದಲ್ಲಿ--

ಮಹಾತ್ಮ್ಯಜ್ಞಾನಪೂರ್ವಸ್ತು
ಸುದೃಢಸ್ಸರ್ವತೋಧಿಕಃ
ಸ್ನೇಹೋ ಭಕ್ತಿರಿತಿ ಪ್ರೋಕ್ತೋ
ತಯಾ ಮುಕ್ತಿರ್ನಚಾನ್ಯಥಾ

ಅತ್ಯಂತ ದೃಢವಾದ, ಮಹಾತ್ಮ್ಯಜ್ಞಾನದಿಂದ ಕೂಡಿದ, ಸರ್ವಾಧಿಕವಾದ ಗಾಢವಾದ ಸ್ನೇಹ ಯಾವುದೋ ಅದೇ ಭಕ್ತಿ ಎಂದು ಕರೆಯುತ್ತಾರೆ ಎಂದು ತಿಳಿಸಿರುವರು. ಇಲ್ಲಿ ಪುರಂದರದಾಸರು ಮಧ್ವಾಚಾರ್ಯರ ಪರಮಾನುಯಾಯಿಗಳು ಮತ್ತು ಮಾಧ್ವಪರಂಪರೆಯ ಆರಾಧಕರು. ಹೀಗಾಗಿ ಸಂಸ್ಕೃತದಲ್ಲಿದ್ದ ಮಧ್ವಶಾಸ್ತ್ರದ ಪ್ರಮೇಯಗಳನ್ನೇ ಕನ್ನಡದಲ್ಲಿ ರಚಿಸಿದ್ದು ದಾಸರ ಹೆಗ್ಗಳಿಕೆ.

"ಕೇಳನೋ ಹರಿ ತಾಳನೋ ?
ತಾಳ ಮೇಳಗಳಿದ್ದು ಪ್ರೇಮವಿಲ್ಲದ ಗಾನ"

ಎಂದು ಸಾರಿದರು. ಆ ಪ್ರೇಮವೇ ಭಕ್ತಿ. ದಾಸರ ದೃಷ್ಟಿಯಲ್ಲಿ -- ಮಾನವ ಜನ್ಮ ಬಲು ದೊಡ್ಡದು ಅದನು ಹಾನಿಮಾಡಲು ಬೇಡಿ ಹುಚ್ಚಪ್ಪಗಳಿರಾ ಎಂದ ದಾಸರು--

ಜ್ಞಾನ ಭಕುತಿ ವೈರಾಗ್ಯವಿಲ್ಲದ
ಮಾನವ ಜನ್ಮವದೇತಕೆ ಸುಡು ಸುಡು

ಎಂದು ಸಾರಿದರು. ಭಕ್ತಿಯೆಂಬುದು ಸುಮ್ಮನೇ ಬರದು. ಅದಕ್ಕೆ ವಿನಯ, ಜ್ಞಾನ, ವೈರಾಗ್ಯ ಬೇಕು.

ಇಂಥಹ ಭಕ್ತಿ ಸುಮ್ಮನೇ ಬರುವುದಲ್ಲ. ಮತ್ತೆ ಹೇಗೆ ಬರುತ್ತದೆ.

ಹಿರಿಯರಿಗೆ ಗುರುಗಳಿಗೆ ದೈವಜ್ಞರುಗಳಿಗೆ
ಶರಣೆನ್ನದೆ ಅನ್ಯಥಾ ಹರಿಭಕುತಿ ಪುಟ್ಟುವುದೆ ?

ಎಂದು ಪ್ರಶ್ನಿಸುತ್ತಾರೆ. ನಿರ್ಮಲಭಾವ, ಶುದ್ಧವಾದ ಅಂತಃಕರಣ, - ಸದಾ ಭಗವಂತನ ಸ್ಮರಣ ಇವು ಭಕ್ತಿಯ ಮೆಟ್ಟಿಲುಗಳು. ಆದರೆ ಕಪಟ ಭಕ್ತಿ, ಕಪಟ ಜಪ, ತಪ, ಪೂಜೆಗಳಿಗೆ ದಾಸರು ನಮ್ಮನ್ನು ನೋಡಿ ನಗುತ್ತಾರೆ.

ಬೂಟಕತನದಲಿ ಬಹಳ ಭಕುತಿ ಮಾಡಿ
ಸಾಟಿಯಿಲ್ಲವು ಎನಗೆಂದೆನಿಸಿ
ನಾಟಕ ಸ್ತ್ರೀಯಂತೆ ಬಯಲ ಡಂಬವ ತೋರಿ
ಊಟಕೆ ಸಾಧನ ಮಾಡಿಕೊಂಬುದಿದು

ಎಂದು ಜರಿಯುತ್ತಾರೆ ಪುರಂದರದಾಸರು. ಹಾಗಾದರೆ ದಾಸರ ದೃಷ್ಟಿ - ಭಕುತಿಯ ಬಗೆಗೆ ಹೇಗೆ?

ಹರಿಭಕುತಿಯೆಂಬ ಸುಧೆಯ ಸಾಗರವಿರೆ
ಅರಿವರೆ ವಿಷವೆಂಬ ಎಳಕೊಳಚೆಯ ನೀರ?

ಸಾಗರಕ್ಕೆ ಭಕ್ತಿಯನ್ನು ಹೋಲಿಸುವ ದಾಸರು, ಮನುಷ್ಯ ಭಕುತಿಯ ತುಟ್ಟತುದಿಯನ್ನು ಮುಟ್ಟುವಾಗ ಹೇಗಿರಬೇಕು. ಅವನಾಡುವ ಉಸಿರೂ ಕೂಡ ಪರಮಾತ್ಮನ ಧ್ಯಾನದಲ್ಲಿ ನಿರತವಾಗಿರಬೇಕು.

ಎಲೆ ಜಿಹ್ವೆ ನೀ ಕೇಳವನ ನಾಮವನೇ ಸ್ತುತಿಸು
ಎಲೆ ಕರಗಳಿರ ಶ್ರೀ ಹರಿ ಪೂಜೆಯನು ಮಾಡಿ



ಎಲೆ ನೇತ್ರಗಳಿರ ಶ್ರೀಕೃಷ್ಣನ ಮೂರ್ತಿಗಳ
ನೋಡಿ
ಎಲೆ ಕಾಲುಗಳಿರ ಶ್ರೀಹರಿ ಯಾತ್ರೆಯ ಮಾಡಿ

-ಎಂದು ಆದೇಶಿಸುತ್ತಾರೆ.

ಪರಮಾತ್ಮನಲ್ಲಿ ಸರ್ವಸಮರ್ಪಣಾಭಾವ, ನಿರ್ವ್ಯಾಜಪ್ರೀತಿ, ಜೀವಿ ತಾನು ಕಾಣುವ, ವ್ಯವಹರಿಸುವ, ಕೂಡುವ, ಏಳುವ ಹೀಗೆ ಪ್ರತಿಯೊಂದು ಹಂತದಲ್ಲೂ ಜಾಗ್ರತಾವಸ್ಥೆಯಿಂದಿದ್ದು - ಸಕಲವೆಲ್ಲವೂ ಹರಿಸೇವೆಯೆನ್ನಿ - ಎಂಬ ಕೃಷ್ಣಾರ್ಪಣ ಬುದ್ಧಿಯಿದ್ದರೇ ಅದೇ ಭಕ್ತಿಯ ಉತ್ಕಟೆಯಾಗುತ್ತದೆ, ಭಗವಂತನ ಸಾಕ್ಷಾತ್ಕಾರವಾಗುತ್ತದೆ. ಪುರಂದರದಾಸರ ಜೀವನದ (ಪೂರ್ವಾಶ್ರಮದ) ದಿಕ್ಕನ್ನು ಬದಲಿಸಲು ಸ್ವತಃ ಪರಮಾತ್ಮನೇ ಬರಬೇಕಾಯಿತು. ಮೂಗುತಿಯ ಪ್ರಕರಣದ ಘಟನೆ ಜೀವನವನ್ನೇ ಬದಲಾಯಿಸಿತು. ಅದನ್ನೇ ದಾಸರು--

ಆದದ್ದೆಲ್ಲ ಒಳಿತೇ ಆಯಿತು
ನಮ್ಮ ಶ್ರೀಧರನ ಸೇವೆಗೆ ಸಾಧನ ಸಂಪತ್ತಾಯಿತು

ಎಂದು ದಾಸರಾದ ಮೇಲೆ ಕೊಂಡಾಡಿದರು.

ನಾರದಾಂಶ ಸಂಭೂತರೆಂದು ಪ್ರತೀತಿಯಿರುವ ಪುರಂದರದಾಸರು ಬಾಳಿನುದ್ದಕ್ಕೂ ಭಕ್ತಿಯ ಬಿಂದಿಗೆಯನ್ನೇ ತುಂಬಿಕೊಂಡು ಬಂದವರು. "ತಾರಕ್ಕ ಬಿಂದಿಗೆ, ನಾ ನೀರಿಗ್ಹೋಗುವೆ ತಾರೇ ಬಿಂದಿಗೆಯ" "ರಾಮನಾಮವೆಂಬ ರಸವುಳ್ಳ ನೀರಿಗೆ" ಎಂಬಂಥ ಹೃದ್ಯಭಾವ ದಾಸರಾಯರದು. ಉಡುಪಿಯ ಕೃಷ್ಣ, ತಿರುಪತಿಯ ಶ್ರೀನಿವಾಸ, ಪಂಢರಪುರದ ವಿಠಲ, ಬದರಿಯ ನಾರಾಯಣ ಎಲ್ಲರೂ ಒಂದೇ ಆಗಿ ದಾಸರ ಪದಗಳಲ್ಲಿ ಬಂದು ನಿಂತಿದ್ದಾರೆ.

ಪುರಂದರದಾಸರ ಸಾಹಿತ್ಯ ಸಮುದ್ರದಕ್ಕಿಂತ ದೊಡ್ಡದು. ಇಲ್ಲಿ ಭಕ್ತಿಯ ಬಗೆಗೆ ವಿವೇಚಿಸಿರುವ ಈ ಲೇಖನ, ಆ ಮಹಾಸಾಗರದ ಅಣುವಿನಲ್ಲಿಯೂ ಅಣುವಾಗಿದೆ ಮಾತ್ರ. ಶ್ರೀ ಪುರಂದರದಾಸರ ಪುಣ್ಯತಿಥಿಯ ಸಂದರ್ಭದಲ್ಲಿ ಈ ಲೇಖನವು ಶ್ರೀದಾಸರಾಯರ ಅಂತರ್ಯಾಮಿಯಾದ ಪಾಂಡುರಂಗವಿಠಲನಲ್ಲಿ ತುಳಸಿದಳ ಅರ್ಪಣವೆಂಬಂತೆ ಅರ್ಪಿಸಲಾಗಿದೆ.

|| ಮದ್ವೇಶಾರ್ಪಣಮಸ್ತು ||

★★★★★★★★

# ತಿರುಪ್ಪಾವೈ

---ಕಡಬಂ ದೊರೆಸ್ವಾಮಿ ಅಯ್ಯಂಗಾರ್ಯ.

(ಹಿಂದಿನ ಸಂಚಿಕೆಯಿಂದ)

ಹಲವಾರು ಧೇನುಗಳ ಪಾಲ್ಗರೆದು ತಣಿಯುಂಡು
ಕಳಕಿಳಿದು ದಳಸಹಿತ ವೈರಿಗಳ ಸಡೆಬಡಿದ
ಅಭಿಜಾತ ಗೋಪಕುಲಕೈತಂದ ಪೊಂಗುಡಿಯೆ,
ಹುತ್ತದಹಿಯೆಂತೆಸೆವ ಸುವರ್ತುಳ ನಿತಂಬಿನಿ,
ಕಾಂತಾರ ಮಾಯೂರಿ! ಮೇಚಕಿತ ಮೇಘನಿಭ
ಕೃಷ್ಣನನು ಪೆಸರೆತ್ತಿ ಪಾಡಿದರು ಪಟ್ಟಿರುವೆ
ಮೌನದಿಂದಲುಗದಿಹೆ ಸೊಕ್ಕುಳ್ಳ ಬಿನ್ನಾಣಿ,
ನೀನೆದ್ದು ಬಾರಮ್ಮ ವ್ರತಫಲವು ಸಿದ್ಧಿಪುದು ನಮಗಿಂದು || ೧೧ ||



ಹಲವಾರು ಹಸುಗಳ ಹಾಲು ಕರೆದು ಜೀವಿಸುವ ಗೋವಳಿಗರು ಸಾಮಾನ್ಯ ಮಾತ್ರರಲ್ಲ; ಅವರು ಶೂರರೂ ಆಗಿದ್ದಾರೆ. ತಮ್ಮನ್ನು ಕೆಣಕಿದ ವೈರಿಗಳನ್ನು ಹುಟ್ಟಡಗಿಸುವ ಸಮರ ಸಾಹಸಿಗಳು. ಇಂಥ ಅಭಿಜಾತ ಕುಲಕ್ಕೆ ನೀನೊಬ್ಬಳು ಕಣ್ಮಣಿ, ಹೇಮಲತಿಕೆ, ನಿನ್ನ ನಿತಂಬವೋ ಹುತ್ತದೊಳಗೆ ಸುತ್ತಿಕೊಂಡು ಮೇಲಾಗಿರುವ ಹಾವಿನಂತಿದೆ. ಅರಣ್ಯದಲ್ಲಿ ಗರಿಗೆದ್ದರಿ ಆನಂದದಿಂದ ಕುಣಿಯುವ ನವಿಲಿನ ಸೋಗೆಯಂತಿದೆ ನಿನ್ನ ಕೇಶರಾಶಿ. ಅಕ್ಕ ಪಕ್ಕದ ನಂಟರಿಪ್ಪರು ಹಾಗೂ ಸಖಿಯರೆಲ್ಲರೂ ನಿನ್ನ ಮನೆಯ ಬಾಗಿಲಿನಲ್ಲಿ ಬಂದು ನೆರೆದಿದ್ದಾರೆ. ನೀಲಮೇಘಶ್ಯಾಮನಾದ ಶ್ರೀಕೃಷ್ಣನನ್ನು ಹೊಗಳಿ ಹಾಡುತ್ತಿದ್ದಾರೆ. ಅವರ ಇಂಚರ ನಿನ್ನ ಕಿವಿಯನ್ನು ಮುತ್ತಿಟ್ಟರೂ ಅಲುಗದೆ ಮಾತಾಡದೆ ಮಲಗಿರುವೆಯಲ್ಲೆ? ನಿನ್ನ ಈ ನಡೆಯ ರಹಸ್ಯವೇನಿರ ಬಹುದು?.......(ಸ್ವಲ್ಪ ಹೊತ್ತು ಚಿಂತಿಸಿ)............ ಓಹೋ ಈಗ ಗೊತ್ತಾಯಿತು; ಭಗವನ್ನಾಮಸ್ಮರಣೆಯ ಆನಂದದಲ್ಲಿ ತಲ್ಲೀನಳಾಗಿರುವೆ ನೀನು, ನಿನ್ನ ಮೌನದ ರಹಸ್ಯವಿಷ್ಟೇ ತಾನೆ? ಅದೇನೇ ಇರಲಿ, ಇನ್ನೆಷ್ಟು ಗರ್ವವೇ ನಿನಗೆ? ನಿನ್ನ ಈ ಕಪಟನಾಟಕವನ್ನುಳಿದು ಎದ್ದು ಬಂದು ನಮ್ಮೊಡನೆ ಕಲೆತರೆ ನಿನ್ನ ಭಗವದಾನಂದದಲ್ಲಿ ನಾವೂ ಭಾಗಿಗಳಾಗುತ್ತೇವೆ. ಆಗ ನಮ್ಮ ವ್ರತಾನುಷ್ಠಾನವು ಸಾರ್ಥಕವಾಗುತ್ತದೆ" ಎಂದು ಪೂದತ್ತಾಳ್ವಾರವರಂತೆ ಭಗವದ್ದರ್ಶನದ ಆನಂದದಲ್ಲಿ ಮೈಮರೆತಿದ್ದ ಭಾಗವತ ಶಿರೋಮಣಿಯೋರ್ವಳನ್ನು ತನ್ನ ಪ್ರಶ್ನೆಗಳ ಸರಮಾಲೆಗಳ ಮೂಲಕ ಎಚ್ಚರಗೊಳಿಸುತ್ತಾಳೆ ಶ್ರೀ ವಿಷ್ಣುಚಿತ್ತಕುಲನಂದನಕಲ್ಪವಲ್ಲಿ ಆಂಡಾಳ್.

ಎಳಗಂದಿ ಹೂಂಕರಿಸಿ ಕಂದನನು ನೆನೆದೊಡನೆ
ಮೊಲೆಯಿಂದ ಪಾಲ್ಸುರಿಯೆ ಕೆಸರಿಡಿದ ಮಹಮನೆಯ
ಸಿರಿವಂತ ನಚ್ಚುಮೆಚ್ಚಿನ ತಂಗಿ! ಮುಂಬಗಲ
ತಣ್ಪನಿಯು ಬಾಗಿಲೆಡೆ ಬೀಳುತಿದೆ ತಲೆಮೇಲೆ;
ಲಂಕೇಶ ರಾವಣನ ಮುಳಿದಿರಿದ ಮನದಿನಿಯ
ರಾಘವನ ನುತಿಸಿದರು ಅದ್ದಿರುವೆ ನಿದ್ದೆಯೊಳು
ತುಟಿದೆಸೆದು; ಬಟ್ಟ ಬಯಲಾಯ್ತಲಾ ನಿನ್ನಿರವು
ಕೇರಿಯೊಳು; ನೀನೇಳು, ವ್ರತಫಲವು ನಿಲುಕುವುದು ನಮಗಿಂದು
|| ೧೨ ||



ಮಹಿಷ ಮಂಡಲವಿದು; ನಮ್ಮದು ಎಮ್ಮೆಗ್ಗಳ ಕೇರಿ; ಎಳೆಗಂದಿಗಳು ಅರಚುತ್ತಿವೆ. ಕರುಗಳನ್ನು ನೆನೆದೊಡನೆ ಅವುಗಳ ಬಿಣ್ಗೆಚ್ಚಲುಗಳಿಂದ

ಹಾಲು ಎಡೆಬಿಡದೆ ಧಾರೆ ಧಾರೆಯಾಗಿ ಹರಿದು ಬರುತ್ತಿದೆ. ಈ ಹಾಲಿನ ತೊರೆಯಲ್ಲಿ ಮನೆಯ ನೆಲವೆಲ್ಲ ಕೆಸರಾಗುತ್ತಿದೆ; ಶ್ರೀಕೃಷ್ಣನ ಅಂತರಂಗಭಕ್ತನೂ, ಜ್ಞಾನಿಯೂ ಬ್ರಹ್ಮಾನುಭವಿಯೂ ಆದ ಶ್ರೀಧಾಮನ ನಾಡಿನಲ್ಲಿ ಸಂಪತ್ತಿನ ಬೀಡಿನಲ್ಲಿ ನೀನಿರುವೆ ಆತನ ತಂಗಿಯಾಗಿ. ನಾವೂ ನೇಸರುದಿಸುವ ಮುನ್ನ ಬಂದಿದ್ದೇವೆ; ನಿನ್ನ ಮನೆಯ ಬಾಗಿಲು ತೆರೆದಿದ್ದರೂ ಹಾಲಿನ ಕೆಸರಿನಲ್ಲಿ ಕಾಲಿಡಲು ತೆರಪಿಲ್ಲ; ನಡುಬೀದಿಯಲ್ಲಿ ನಿಂತಿದ್ದೇವೆ; ತಲೆಮೇಲೆ ಮಂಜು ಸುರಿಯುತ್ತಿದೆ; ಅದನ್ನೂ ಲೆಕ್ಕಿಸದೆ ನಿನಗಾಗಿ ಕಾದಿದ್ದೇವೆ. ತನ್ನ ವೈರಿಗಳಿಗೂ ವಾತ್ಸಲ್ಯ ಸಾರನಿಧಿ ಶ್ರೀರಾಮ, ಅವನ ಬಾಣಕ್ಕೆ ಬಲಿಯಾಗಬೇಕೆಂದು ಬಯಸಿದ ತೆಂಕಣ ಲಂಕೇಶನ ಪೇರಾಸೆಯನ್ನು ಈಡೇರಿಸಿದ ರಣಪುಂಗವ ಶ್ರೀರಾಮಚಂದ್ರನ ವಿಷಯಕವಾದ ಮಧುರಗಾನವನ್ನು ಕೇಳಿಸಿಕೊಂಡರೂ ತುಟಿ ದೆಸೆದು ಮಲಗಿರುವೆಯಲ್ಲ ತಂಗಿ? ಇದೆಂಥ ಗಾಢನಿದ್ರೆ ನಿನಗೆ? (ಕೈಪಾಗಾಢ ನಿದ್ರಾ?) ಅಕ್ಕಪಕ್ಕದವರಿಗೆ ಇದು ಗೊತ್ತಾದರೆ, ಇವಳಿಗೆಷ್ಟು ಅಹಂಕಾರ, ಧನಮದ? ಎಂದು ಮಾತಾಡಿಕೊಳ್ಳುತ್ತಾರೆ. ಅದಕ್ಕೆ ಅವಕಾಶ ಕೊಡದೆ ಬೇಗನೆ ಎದ್ದು ಬಾರಮ್ಮ" ಎಂದು ಕೇಳಿಕೊಳ್ಳುತ್ತ ಪರಮಾರ್ತರಾಗಿ ಪರಮಾತ್ಮನನ್ನೇ ಸದಾ ನೆನೆಯುತ್ತಿದ್ದ ಪೊಯೊಹ್ಯೆ ಆಳ್ವಾರರಿಗೂ ಸುಪ್ರಭಾತ ಹಾಡುತ್ತಾಳೆ, ಆಮುಕ್ತಮಾಲ್ಯದೆ ಗೋದಾ ದೇವಿ ಈ ಪದ್ಯದಲ್ಲಿ.

ಕೊಕ್ಕನುರೆ ಸೀಳ್ಗೆಡೆದು ಬಕನನ್ನು ಸಂಹರಿಸಿ,
ಕಡುಗೇಡಿ ದಶಶಿರನ ತಲೆಗಳನು ಚಿವುಟಿಸೆದ,
ಧೀರನನು ಕೊಂಡಾಡಿ ನೋಂಪಿ ಯೆಡೆಗೈದಿದರು
ಕನ್ನೆಯರು; ಶುಕ್ರನುದಿಸಿಬರೆ, ಮುಳುಗಿದನು ಗುರು-
ತಾನು; ಖಗಕುಲವುಲಿಯುತಿದೆ, ನೀ ನಿನ್ನೆಗವು
ಪಟ್ಟಿರುವೆ; ಮಧುಪಾಳಿಗೆಣೆಯೆನಿಪ ಏಣಾಕ್ಷಿ!
ಶಿಶಿರಜಲ ಮಜ್ಜನವನೊಲ್ಲದಿಹೆ ಶಯ್ಯೆಯೊಳು?
ವಂಚಿಸದೆ ಬಾರಮ್ಮ ವ್ರತ ಫಲವು ನಿಲುಕುವುದು ನಮಗಿಂದು ||
೧೩||



"ಬಕಾಸುರನ ಕೊಕ್ಕನ್ನು ಹುಲ್ಲೆಸಳಿನಂತೆ ಸೀಳಿ ಎಸೆದವನು ಶ್ರೀಕೃಷ್ಣ, ಲಂಕಾಧಿಪತಿಯಾಗಿದ್ದ ಹೆಂಗಳ್ಳ ರಾವಣನ ತಲೆಗಳನ್ನು ಚೆಂಡಾಡಿದವನು ಶ್ರೀರಾಮ. ತ್ರೇತಾಯುಗದ ಶ್ರೀರಾಮ, ದ್ವಾಪರಯುಗದ ಶ್ರೀಕೃಷ್ಣ ಇಬ್ಬರೂ ಒಂದೇ. ಇವರ ವೀರ ಚರಿತ್ರೆಗಳನ್ನು ಕೊಂಡಾಡುತ್ತ ಗೋವಳಿಗ ಹೆಣ್ಣುಗಳೆಲ್ಲ ಸಂಕೇತ ಸ್ಥಾನ ಸೇರಿದ್ದಾರೆ; ಗುರು (ಬೃಹಸ್ಪತಿ) ಅಸ್ತಮಿಸಿದ; ಶುಕ್ರೋದಯವಾಯಿತು; ಪಕ್ಷಿಗಳು ಚಿಲಿಪಿಲಿ ಗುಟ್ಟುತ್ತ ಚದುರಿದುವು. ಹೂವಿಗೆ ಮುತ್ತಿದ ಬಂಡುಣಿಗೆ ಎಣೆಯೆನಿಸಿದ ಏಣಾಕ್ಷಿ, ಯಮುನೆಯ ಶೀತಲ ಜಲಸ್ನಾನ ಮಾಡದೆ ಇನ್ನೂ ಮಲಗಿರುವೆಯಲ್ಲ? ಕಡು ಚೆಲುವೆ, ಪತಿವ್ರತೆ ನೀನಮ್ಮ; ಕಳ್ಳನಿದ್ರೆಯನ್ನು ತೊರೆದು ನೀರಾಟಕ್ಕೆ ಬಾ! ನಮ್ಮ ವ್ರತವಿದು ಸಿದ್ಧಿಸಲಿ.

ಸ್ವಾಪದೇಶಾರ್ಥವೆಂದರೆ ರಹಸ್ಯಾರ್ಥ. ಈ ಪಾಶುರವು (ಪದ್ಯ) ತೊಂಡರಡಿಪ್ಪೊಡಿಯಾಳ್ವಾರಿಗೂ ಸುಪ್ರಭಾತ ಸೂಕ್ತಿಯೆಂದು ಅಣ್ಣಂಗರಾಚಾರ್ಯ ಸ್ವಾಮಿಗಳು ಅಭಿಪ್ರಾಯ ಪಡುತ್ತಾರೆ. ಹೀಗೆ ಹೇಳಲು ಕಾರಣಗಳು ಹಲವು:

ತೊಂಡರಡಿಪ್ಪೊಡಿ ಆಳ್ವಾರರು ಧನುರ್ಮಾಸದ ಜ್ಯೇಷ್ಠಾನಕ್ಷತ್ರದಲ್ಲಿ ಮಂಡಂಗುಡಿಯೆಂದೆಡೆಯಲ್ಲಿ ಅವತರಿಸಿದರು. ಪೆರಿಯಾಳ್ವಾರರಂತೆ ನಿತ್ಯವೂ ತಮ್ಮ ನಂದನವನದಲ್ಲಿ ಬೆಳೆಸಿದ ಹೂ ತುಳಸಿಗಳ ಮೇಲೆಯೇ ಕಣ್ಣಿಟ್ಟು - ಶ್ರೀರಂಗನಾಥನಿಗೆ ಪುಷ್ಪಕೈಂಕರ್ಯವೆಸಗುತ್ತಿದ್ದರು. ರಂಗನಾಥನ ಹೊರತು ಮತ್ತಾರನ್ನೂ ತಮ್ಮ ಕಣ್ಣುಗಳು ಕಾಣದಿರಲಿ (ಮಟ್ರೊನ್ರಿನೈಕ್ಕಾಣವೇ) ಎಂಬಂತೆ ಒಬ್ಬ ಪತಿವ್ರತಾ ಶಿರೋಮಣಿ ಗೆಣೆಯೆನಿಸಿ ಪ್ರತಿಜ್ಞೆ ಮಾಡಿದರು. ಈ ಅಂಶವು "ಪಾವಾಯ್" ಎಂಬ ಪದ ಪ್ರಯೋಗದಿಂದ ಸೂಚಿತವಾಗಿದೆ. ರಂಗನಾಥನ ವಿವಿಧ ಅವತಾರಗಳಾದ ಶ್ರೀಕೃಷ್ಣ, ಶ್ರೀರಾಮ, ಶ್ರೀನಾರಸಿಂಹ ಮೂರ್ತಿಗಳನ್ನು ನೆನಸಿಕೊಂಡ ತೊಂಡರಡಿಪ್ಪೊಡಿ ಆಳ್ವಾರಿಗೂ (ಭಕ್ತರ ಪಾದಧೂಳಿ) ತನ್ನ ಸಖಿಯರೊಡನೆ ಸುಪ್ರಭಾತವನ್ನು ಹಾಡಿದ್ದಾಳೆ, ಶ್ರೀರಂಗನಾಥ ದಯಿತೆ ಗೋದೆ.

ನಿಜಗೇಹದುಪವನದ ತಿಳಿನೀರ ಕೊಳದೊಳಗೆ
ಕಮಲವನ ಅರಳಿದುದು, ಕುಮುದವನ ಸೊರಗಿದುದು;
ಚೆಂಗಾವಿಯುಡೆಯುಟ್ಟ ಸುಲಿಪಲ್ಲ ತಾಪಸರು
ದೇಗುಲವನೈದಿದರು ನಿಜಶಂಖ ಬಾಜಿಸುತ;
ನಮ್ಮನುಷೆಯೊಳೆಚ್ಚರಿಸುವೆನೆಂದೆ ನುಡಿಗಳ್ಳಿ,
ಇನ್ನಾದರೆದ್ದೇಳು ನಾಣಿಲಿಯ ವಾಚಾಳಿ,
ಶಂಖಚಕ್ರಧರ ಪಂಕಜ ನೇತ್ರನನು ಪೊಗಳಿ
**ಪಾಡಿದಡೆ ಕೈಗೊಂಡ ವ್ರತಫಲವು ನಿಲುಕುವುವು ನಮಗಿಂದು ||**
**೧೪ ||**



ನಿಮ್ಮ ಹಿತ್ತಲಿನ ಕೈತೋಟದ ಕೊಳವನ್ನಾದರೂ ನೋಡು; ಕೆಂದಾವರೆಗಳು ಅರಳಿವೆ, ಕನ್ನೈದಿಲೆಗಳು ಮುಕುಳಿತವಾಗಿವೆ. ಇದೋ ಬೆಳಕು ಹರಿಯಿತು; ಸುಲಿಪಲ್ಲ ಸಂನ್ಯಾಸಿಗಳು ಕಾವಿಬಟ್ಟೆಯುಟ್ಟು ತಮ್ಮ ಮಠಗಳ ಬಾಗಿಲನ್ನು ತೆರೆಯಲು ಶಂಖವೂದುತ್ತ ಹೋಗುತ್ತಿದ್ದಾರೆ. ಮುಂಚಿತವಾಗಿ ಬಂದು ನಮ್ಮನ್ನೆಲ್ಲ ಎಬ್ಬಿಸುವುದಾಗಿ ಜಂಬ ಕೊಚ್ಚಿದವಳಲ್ಲವೆ ನೀನು? ಇನ್ನೂ ಮಲಗಿರುವೆಯಲ್ಲ! ಆಡಿದಂತೆ ನಡೆಯದಿರುವ ಹೇವವಿಲ್ಲದ ಹೆಣ್ಣೆ! ಶಂಖಚಕ್ರಧಾರಿಯಾದ ದೊಗಸೆಗಣ್ಣಿನ ಶ್ರೀಕೃಷ್ಣನನ್ನು ಕುರಿತು ಕೊಂಡಾಡಲು ನಾವೆಲ್ಲ ಹೋಗುತ್ತಿದ್ದೇವೆ, ಎದ್ದು ಬಾ; ನಮ್ಮ ವ್ರತ ಆಗ ಸಫಲವಾಗುತ್ತದೆ.

ಸ್ವಾಪದೇಶದ ಪ್ರಕಾರ ಸಕಲ ವೇದಾರ್ಥಗಳನ್ನೂ ಅಡಕಮಾಡಿ "ಅಮಲನಾದಿ ಪಿರಾನ್" ಎಂಬ ಹತ್ತು ಪಾಶುರಗಳನ್ನು ಹಾಡಿದ ತಿರುಪ್ಪಾಣಿ ಆಳ್ವಾರನ್ನು ಎಚ್ಚರಿಸುವ ಪ್ರಬಂಧವಿದು. ಇದರಲ್ಲಿ ಮೊದಲ ಮೂರು ಪಾಶುರಗಳ ಪ್ರಥಮಾಕ್ಷರಗಳು ಅಕಾರ ಉಕಾರ ಮಕಾರ ಸ್ವರೂಪಿಯಾದ ಪರಮಾತ್ಮ ಸೂಚಕಗಳಾಗಿವೆ. ಒಂದೊಂದು ಪದ್ಯದಲ್ಲಿಯೂ ಪಾದಕಮಲ, ಪೀತಾಂಬರ, ನಾಭೀಕಮಲ, ಉಡಿದಾರ, ವಕ್ಷಸ್ಥಲ, ಕಂಠ, ಬಿಂಬಾಧರ, ಆಯತಾಕ್ಷ ನೀಲತನು - ಹೀಗೆ ಅಮೃತ ಸ್ವರೂಪನಾದ ಶ್ರೀರಂಗನಾಥನ ವರ್ಣನೆಗಳಿವೆ. ಮಿಗಿಲಾಗಿ ಅಂತ್ಯಜರಾದ ತಿರುಪ್ಪಾಣಿಗೂ ಆ ಕಾಲದಲ್ಲಿಯೇ ಎಂಥ ಶ್ರೇಷ್ಠಸ್ಥಾನ ವಿತ್ತೆಂಬುದು ಈ ಪದ್ಯಮಾಲಿಕೆಯಿಂದ ಗೊತ್ತಾಗುತ್ತದೆ. ಹನ್ನೆರಡು ಮಂದಿ ವೈಷ್ಣವ ಆಳ್ವಾರ್‌ಗೋಷ್ಠಿಯಲ್ಲಿ ಇಂದಿಗೂ ಇವರಿಗೆ ಪ್ರಮುಖ ಸ್ಥಾನವಿದೆ. ಶ್ರೀವೈಷ್ಣವಾಲಯಗಳಲ್ಲಿ ಇವರ ವಿಗ್ರಹ ಪೂಜಿಸಲ್ಪಡುತ್ತಿದೆ ಎಂಬುದು ಗಮನಾರ್ಹ.

ಕನ್ನೆಯರು ಕರೆಯ ಬಂದಡೆಯು ನೀಂ ಮಲಗಿರುವೆ
ಎಳೆಗಿಳಿಯೆ! ಬಂದೆನಿದೊ, ಸಿಡುಕದಿರಿ ಗದರಿಸುತ;
ಬಿರುನುಡಿಯ ವಾಚಾಳಿ ನೀನಲ್ತೆ? ಅಹುದಹುದು
ನಿಮಗೇನು ಬೇಕೀಗ? ಮರೆಮಾಚದಿರ ಲೆದ್ದು-
ಬಾರೆ; ಸಂಗಾತಿಗಳು ಬಂದಿಹರೊ ? ತಲೆಯೆಣಿಸಿ
ನೀನೆ ನಿಶ್ಚಯಿಸಮ್ಮ ಕುವಲಯನ ಕೊಂದಿಕ್ಕಿ



ಶತ್ರುಗಳ ಭಂಜಿಸಿದ ಮಾಯಾವಿ ಕೃಷ್ಣನನು
ಭಕ್ತಿಯಿಂದರ್ಚಿಸಲು, ವ್ರತಫಲವು ಸಿದ್ಧಿಪುದು ನಮಗಿಂದು || ೧೫ ||

ಈ ಪಾಶುರದಲ್ಲಿ (ಪದ್ಯ) ಸಂಭಾಷಣಾರೂಪವಾದ ನಾಟಕೀಯತೆ ಅಡಕವಾಗಿದೆ. ಗೋಪಿಯೊಬ್ಬಳ ಮನೆಯ ಹೊರಬಾಗಿಲಿನಲ್ಲಿ ನಿಂತ ಗೋದೆ ಸಖಿಯರ ಸಹಿತ ಭಗವದ್ಧಾನದಲ್ಲಿ ಮುಳುಗಿದ್ದ ಮತ್ತೊಬ್ಬ ಸಖಿಯನ್ನು ಎಚ್ಚರಗೊಳಿಸುವ ಪ್ರಯತ್ನವನ್ನು ಇಲ್ಲಿ ಮನಮೋಹಕವಾಗಿ ಚಿತ್ರಿಸಿದ್ದಾಳೆ. ಇದರ ವೈಖರಿಯನ್ನಾದರೂ ನೋಡೋಣ :

ಗೋದೆ :-- ಎಲೆ ಶುಕವಾಣಿ! ಇದೇನು ಇನ್ನೂ ನಿದ್ರಿಸುತ್ತಿರುವೆ? ನನ್ನ ಸಖಿಯರೊಡನೆ ಬಂದಿದ್ದೇನೆ.

ಒಳಗಿನ ಸಖಿ :-- ಸಿಡಿಮಿಡಿಗೊಂಡು ನನ್ನನ್ನು ಗದರಿಸಿ ಕರೆಯಬೇಡಿ; ಇದೋ ಸಿದ್ಧಳಾಗಿ ನಾನೇ ಹೊರಟು ಬರುತ್ತಿದ್ದೇನೆ.

ಗೋದೆ:-- ನಮಗೆ ಮೊದಲೇ ಗೊತ್ತು; ನೀನು ವಾಕ್ಚತುರೆ, ಮಾತಿನ ಮಲ್ಲಿ ಎಂಬುದು.

ಒಳಗಿನ ಸಖಿ :-- ನನಗಿಂತ ಮಿಗಿಲಾಗಿ ನೀನೆ ಮಾತಿನ ಮಲ್ಲಿ; ಚಿಂತೆಯಿಲ್ಲ, ನಿನ್ನಂತೆ ನಾನೂ ವಾಚಾಳಿ ಎಂದುಕೊಳ್ಳಿ

ಗೋದೆ :-- ನಿನ್ನ ಮನಸ್ಸಿನಲ್ಲಿ ಗುಟ್ಟೇನೇ ಇರಲಿ, ಅದನ್ನೆಲ್ಲಾ ಒತ್ತಟ್ಟಿಗಿಟ್ಟು ಬೇಗನೆ ಹೊರಟು ಬಾರೆ.

ಒಳಗಿನ ಸಖಿ :--ಎಲ್ಲರೂ ಹೊರಟಿದ್ದಾರೆಯೆ?

ಗೋದೆ :-- ಹೊರಟು ಬಿಟ್ಟಿದ್ದಾರೆ.

ಒಳಗಿನ ಸಖಿ :-- ಹೊರಟಿರುವವರು ಎಷ್ಟು ಮಂದಿ?

ಗೋದೆ :-- ಸಂದೇಹವಿರುವುದಾದರೆ ನೀನೆ ಎದ್ದು ಬಂದು ಎಣಿಸಿಕೊ. ಬಲಶಾಲಿಯಾದ ಕುವಲಯಾ ಪೀಡನನ್ನು ನಮ್ಮ ಕೃಷ್ಣ ಕೊಂದು ಬಿಟ್ಟ; ಪರವೈರಿದರ್ಪವಿಧ್ವಂಸಕ ಆಶ್ಚರ್ಯ ಗುಣಚೇಷ್ಟಿತ; ಅವನನ್ನು ಕುರಿತು ಸ್ತೋತ್ರ ಮಾಡಲು ಎದ್ದು ಬಾರೆ. ನಮ್ಮೊಡನೆ ನೀನು ಬಂದರೆ ನಮ್ಮ ವ್ರತಾಚರಣೆ ಸಾಂಗವಾದೀತು.

ನಮ್ಮೊಡೆಯ ನಂದಗೋಪನರಮನೆಯ ಪಡಿಯರನೆ,
ಗುಡಿ ತೋರಣಂಗಳಿಂ ಕಂಗೊಳಿಪ ಮಣಿಖಚಿತ
ಕವಾಟದ ಗುಣಿಯನು ತೆರೆನೀನು; ಮಣಿವಣ್ಣ ಮಾಯಾವಿ ನಮಗಂದೆ ವಾಗ್ದಾನ ವಿತ್ತಿಹನು;
ತಿಳಿಮನದ ಬಾಲೆಯರು ಬಂದಿಹೆವು ಪಾಡಲ್ಕೆ
ಸುಪ್ರಭಾತವನು; ಬಾಯ್ಬಡಿಯ ದಟ್ಟದಿರು; ನೀಂ
ನಮ್ಮೊಡೆಯ; ನಿಲುಗದವ ತೆರೆದಿಡುತ ನೆರವಾಗು
ಕನ್ನೆಯರು ಕೈಗೊಂಡ ವ್ರತಫಲವು ನಿಲುಕುವುದು
ನಮಗಿಂದು || ೧೬ ||



"ನಮ್ಮೊಡೆಯನಾದ ನಂದಗೋಪನರಮನೆಯ ದ್ವಾರಪಾಲಕನೆ! ಗುಡಿತೋರಣಗಳಿಂದ ಅಲಂಕೃತವಾದ ರಾಜದ್ವಾರವನ್ನು ಕಾಯುತ್ತಿರುವ ಪಡಿಯರನೆ! ರತ್ನ ಖಚಿತವಾದ ಬಾಗಿಲಿನ ಅಗುಳಿಯನ್ನು ತೆಗೆಯಪ್ಪ. ಗೋಪಕುಲದ ಕನ್ನೆಯರು ನಾವು, ಸ್ವಾಮಿಗೆ ಬೇಕಾದವರು; ಹೊರಗಿನವರಲ್ಲ. ಶ್ರೀಕೃಷ್ಣ ಮಾಯಾಮಯ; ನೀಲರತ್ನದಂತೆ ತೊಳಗಿ ಬೆಳಗುವವನು; ನಮಗೆ ನೆನ್ನೆಯೇ, ಮಾತು ಕೊಟ್ಟಿದ್ದಾನೆ, ನಮ್ಮ ಇಷ್ಟಾರ್ಥವನ್ನು ಈಡೇರಿಸುವುದಾಗಿ. ಅವನ ದರ್ಶನ ಪಡೆಯಲು ತ್ರಿಕರಣ ಶುದ್ಧಿಯಿಂದ ಬಂದಿದ್ದೇವೆ. ತಡೆಯದೆ ಬಾಗಿಲನ್ನು ತೆರೆದು ಬಿಟ್ಟರೆ ಸಾಕು, ನಮ್ಮ ಪುಣ್ಯ ಫಲಿಸಿದಂತೆ. ಬಿಗಿಯಾಗಿ ಮುಚ್ಚಿದ ಈ ನೆಲೆಬಾಗಿಲನ್ನು ತೆರೆದು ನಮ್ಮನ್ನು ಒಳಗೆ ಬಿಡಪ್ಪ - ಎಂದು ಶ್ರೀ ವಿಷ್ಣು ಚಿತ್ತಾತ್ಮಜೆ ಗೋದಾದೇವಿ ಗೆಳತಿಯರೊಡನೆ ಹಿರಿಯರಾದ ಹತ್ತು ಮಂದಿ ಆಳ್ವಾರುಗಳನ್ನು ಮುಂದಿಟ್ಟುಕೊಂಡು ಬೇಡುತ್ತಿದ್ದಾಳೆ, ಈ ಪದ್ಯದಲ್ಲಿ.

ವಸನಾನ್ನ ಪಾನೀಯಗಳ ನೀವ ದಾತಾರ,
ನಮ್ಮೊಡೆಯ ನೀನೆದ್ದು ಬಾ ನಂದಗೋಪಾಲ;
ಎಳೆವಳ್ಳಿಗೆಣೆಯೆನಿಪ ನಾರಿಯರ ನಾಯಕಿಯೆ,
ಗೋಪಕುಲ ದೀಧಿತಿಯೆ ನಮ್ಮರಸಿ ಯಶೋದಾ
ಮಾತೆ ನೀನೆದ್ದು ಬಾರಮ್ಮ ನೀಳಾಗಸಕೆ
ಅಡಿ ಚಾಚಿ ಅಳೈರಿದು ಜಗವಳೆದ ವಾಮನನೆ
ಚೆಂದೊನ್ನ ಪೆಂಡೆಯದ ಪಾದಗಳ ಸಿರಿವಂತ,
ಬಲನೊಡನೆ ಬರಲೆಮ್ಮನೋಂಪಿಯಿದು ಸಿದ್ಧಿಪುದು || ೧೭ ||

ನಂದಗೋಪಾಲ, ನಿನ್ನ ಮಗನಂತೆ ನೀನೂ ದಾನಶೂರ. ಅನ್ನ ನೀರು ಉಡೆಯುಪ್ಪಟಗಳನ್ನು ಧರ್ಮಾರ್ಥವಾಗಿ, ದಾನಮಾಡುವವನು ನೀನು; ಎದ್ದು ಬಾರಯ್ಯ ನಿನ್ನ ಸುಪುತ್ರ ಶ್ರೀಕೃಷ್ಣ ಆರ್ತಳಾಗಿದ್ದ ದ್ರೌಪದಿಗೆ ಅಕ್ಷಯ ವಸ್ತ್ರವನ್ನಿತ್ತು, ದೂರ್ವಾಸರಿಗೂ ಅವರ ಪರಿವಾರಕ್ಕೂ ದ್ರೌಪದಿಯ ಮೂಲಕ ಅನ್ನಪಾನೀಯಗಳನ್ನು ಒದಗಿಸಿದವನು; ನಮ್ಮಾಳ್ವಾರರು ಕೊಂಡಾಡಿರುವಂತೆ ತಿನ್ನುವ ಅನ್ನ, ಕುಡಿಯುವ ನೀರು ಸವಿಯುವ ತಾಂಬೂಲ - ಎಲ್ಲವೂ ಅವನೇ. ಇಂಥವನ ತಾಯಿ ನೀನಮ್ಮ ಯಶೋದೆ. ಗೋಪಕುಲಕ್ಕೆಲ್ಲಾ ಮಂಗಳ ದೀಪವೇ ನೀನು; ಎಚ್ಚರಗೊಳ್ಳಮ್ಮ ಗಗನಕ್ಕೆ ಸಿರಿಯಡಿಯನ್ನು ಚಾಚಿ ಅಳೈರಿದು ಲೋಕಗಳನ್ನು ಅಳೆದ ತ್ರಿವಿಕ್ರಮ ರೂಪಿಯಾದ ಶ್ರೀಕೃಷ್ಣ, ನೀನೇಳಯ್ಯ ಚೆಂಬೊನ್ನ ವೀರ ಪೆಂಡೆಯ (ಕಾಲಂದಿಗೆ)ವನ್ನು ಧರಿಸಿದ ಸಿರಿಯಡಿಯ ಬಲದೇವ, ನಿನ್ನ ತಮ್ಮನೊಡನೆ ಎದ್ದು ಬಾರಪ್ಪ. ನಾವೆಲ್ಲ ಕಲೆತು ನಮ್ಮ ಇಷ್ಟಾರ್ಥ ಸಾಧನೆಗಾಗಿ ಕೈಗೊಂಡ ವ್ರತಸ್ನಾನಕ್ಕಾಗಿ ಹೋಗೋಣ - ಎಂದು ಶ್ರೀಕೃಷ್ಣಭಕ್ತೆ ಗೋದಾದೇವಿ ಪ್ರಾರ್ಥಿಸುತ್ತಾಳೆ ಈ ಪದ್ಯದಲ್ಲಿ.

ಮದಗಜಕೆ ಬೆಂಗುಡದ ತೋಳ್ಬಲದ ನಂದನಾ
ಮರುಮಗಳೆ! ನರುಮಲರ ಸುಳಿಗುರುಳ ನವತರುಣಿ,
ಕೂಗುತಿವೆ ಕೋಳಿಗಳು; ಮಾಧವೀಲತೆ ವನೆಯ
ಮೇಲಿಂದ ಕೋಗಿಲೆಯ ಕಲರವವ ಕೇಳಮ್ಮ;
ದುಂಡನೆಯ ಕೈವೆರಳ ಕರಸರೋಜ ದೊಳುಲಿವ
ಕಂಕಣದ ಚೆಲುವಿನಿಂ ಸಂತಸವ ಸೂಸುತ್ತ
ತೆರೆಯಮ್ಮ ಬಾಗಿಲನು; ನಿನ್ನಿನಿಯ ಕೃಷ್ಣನನು
ಕೊಂಡಾಡೆ ಬಂದಿಹೆವು ವ್ರತಫಲವು ಸಿದ್ಧಿಪುದು
ನಮದಿಂದು || ೧೮ ||





ಮದ್ದಾನೆ ನುಗ್ಗಿಬಂದರೂ ಹಿಮ್ಮೆಟ್ಟಿ ಓಡದ ತೋಳ್ಬಲವುಳ್ಳ ನಂದ ಗೋಪನ ಸೊಸೆ ನೀನು, ನರುಗಂಪಿನ ಸುಳಿಗುರುಳ ನಾಗವೇಣಿ ನಪ್ಪಿನ್ನೆಯೆಂಬ ಹೆಸರಾಂತ ನೀಳಾದೇವಿ! ಬೆಳಗಾಯಿತು, ಎಲ್ಲೆಲ್ಲಿಯೂ ಜಾವದ ಕೋಳಿಗಳು ಕೂಗುತ್ತಿವೆ. ಮಾಧವೀಲತೆಯ ಚಪ್ಪರದ ಮೇಲೆ ನಿಂದ ಕೋಗಿಲೆಗಳು ಹಲವು ಸಾರಿ ದನಿಗೂಡಿಸುತ್ತಿವೆ, ದುಂಡು ಬೆರಳುಗಳುಳ್ಳ ನಿನ್ನ ಕೈಗಳು ಕೆಂದಾವರೆಯಂತೆ ರಮ್ಯವಾಗಿವೆ. ಸೌಮಂಗಲ್ಯವನ್ನು ಸೂಸುವ ನಿನ್ನ ಕಂಕಣ ರಿಂಗಣದೊಂದಿಗೆ ಸಂತೋಷದಿಂದ ಎದ್ದು ಬಂದು ಬಾಗಿಲನ್ನು ತೆರೆಯಮ್ಮ ಆಗತಾನೆ ನಮ್ಮ ವ್ರತವು ಕೈಗೂಡುವುದು - ಎಂದು ಗೋದಾದೇವಿ ಬೇಡುತ್ತಾಳೆ ನಪ್ಪಿನ್ನೆಯನ್ನು, ಈ ಪದ್ಯದಲ್ಲಿ.

ಪೊಂಜೊಡರು ಬೆಳಗುತಿರೆ ಗಜದಂತದಿಂ ಸಮೆದ
ಮಂಚವನಡರಿ ಮೆತ್ತನೆಯ ಪಂಚಶಯನದೊಳು
ಕೊತ್ತಲರ ಕುಟಿಲ ಕುಂತಳ ನಿಚಯ ದಂಗನೆಯ
ಕುಚಾಲಿಂಗನದ ಸುಮಕೋಮಲೋರುಸ್ಥಳನೆ,
ನುಡಿಯಲೊಲ್ಲೆಯ ನೀನು? ಅಂಜನಾಯತನೇತ್ರೆ
ನಿನ್ನಿನಿಯ ನಿಂದರೆಗಳಿಗೆ ಅಗಲಿರ ಲೊಲ್ಲೆಯ?
ಅಚ್ಚರಿಯ ನೀತಿಯಿದು ಒಪ್ಪುಗುಮೆ? ನೀನೆದ್ದು
ಅಚ್ಯುತನ ನೆಚ್ಚರಿಸೆ, ವ್ರತಫಲವು ಸಿದ್ಧಿಪುದು || ೧೯ ||



ಮಂಗಳದೀಪಸ್ತಂಭಗಳು ಬೆಳಗುತ್ತಿವೆ, ಕುವಲಯಾಪೀಡನೆಂಬ ಗಜದ ದಂತದಿಂದ ಮಾಡಿದ ಕಾಲುಗಳುಳ್ಳ ಮಂಚದ ಮೇಲೆ ಮಲಗಿರುವ ಪರಿಮಳ ಕೇಶಿಯಾದ ನೀಳಾದೇವಿಯ (ನಪ್ಪಿನ್ನೆಯ) ಮೊಲೆಗಳ ಮೇಲೆ ನಿನ್ನ ಕುಸುಮ ಕೋಮಲ ವಕ್ಷಸ್ಥಳವನ್ನಿಟ್ಟುಕೊಂಡು ಪವಡಿಸಿದ ಶ್ರೀಕೃಷ್ಣ, ಬಾಯಿತೆರೆದು ಮಾತಾಡಬಾರದೆ ? ಅಂಜನಾಲಂಕೃತ ನೇತ್ರೆಯಾದ ನಪ್ಪಿನ್ನೆ! ನಿನ್ನ ವಲ್ಲಭನನ್ನು ಅರೆಗಳಿಗೆಯಾದರೂ ಬಿಟ್ಟಿರಲಾರೆಯಾ? ನಿನ್ನ ನಡೆನುಡಿ ಆಶ್ಚರ್ಯಕರವಾಗಿದೆ. ನಿನಗೆ ಇದು ಯುಕ್ತವೂ ಅಲ್ಲ, ಧರ್ಮವೂ ಅಲ್ಲ. ಮಿಗಿಲಾಗಿ ಉಚಿತವೂ ಅಲ್ಲ. ನೀನು ಎದ್ದು ಶ್ರೀಕೃಷ್ಣನನ್ನು ಎಬ್ಬಿಸು, ಅವನ ಕಟಾಕ್ಷ ವೀಕ್ಷಣೆಯಿಂದ ನಮ್ಮ ವ್ರತವು ಸಾಂಗವಾಗಿ ನೆರವೇರುತ್ತದೆ - ಎಂದು ಮೂದಲಿಸುತ್ತ ಗೋದಾದೇವಿ, ನಪ್ಪಿನ್ನೆ ಶ್ರೀಕೃಷ್ಣರ ಗಾಢಪ್ರೇಮವನ್ನು ವರ್ಣಿಸುತ್ತಾಳೆ.

ಮೂವತ್ತು ಮೂರ್ಕೋಟಿ ಅಸುರರಿಂ ಮುಂಬರಿದು
ಅಭಯವನು ನೀನಿತ್ತೆ; ಪಕ್ಷಪಾತವರಿಯದ
ಅರಿಭಯಂಕರ ಮಹಾಪರಾಕ್ರಮಿ ನಿರಂಜನ
ಧುರಧೀರ, ಭಕ್ತವತ್ಸಲ, ನಿದ್ರೆ ತೊರೆದೆದ್ದು
ಬಾರಯ್ಯ; ಕೋಮಲಿತ ಕುಚಕುಂಭೆ ಕೆಂದುಟಿಯ
ತೆಳ್ನಸಿರ ಸಿರಿಯರಸಿ ನಪ್ಪಿನ್ನೆ! ಬೀಸಣಿಗೆ
ಕನ್ನಡಿಯ ನಣಿಗೈದು ನಿನ್ನಿನಿಯನೆಮಗಿಂದೆ
ಮಜ್ಜನವ ಮಾಡಿಸಲು, ವ್ರತಫಲವು ನಿಲುಕುವುದು ನಮಗಿಂದು
|| ೨೦ ||



ಮೂವತ್ತು ಮೂರು ಕೋಟಿ ದೇವತೆಗಳಿಗೆಲ್ಲ ಮುಂದಾಳಾಗಿ ನುಗ್ಗಿ ಅವರ ಭಯನಿವಾರಣೆ ಮಾಡಬಲ್ಲ ಸಮರೈಕಸಾಹಸಿ, ಭಕ್ತವತ್ಸಲ, ಮಹಾಪರಾಕ್ರಮಿ, ವೈರಿಕುಲ ಕಾಲಾಂತಕ, ನಿಷ್ಕಳಂಕ ಹೃದಯಿ ಓ ಶ್ರೀಕೃಷ್ಣ ನಿದ್ರೆಯಿಂದೆದ್ದು ಬಾರಯ್ಯ. ಕೋಮಲ ಕುಚೋನ್ನತೆ ಬಿಂಬಾಧರೆ ತೆಳ್ನಸಿರ ಸಿರಿಯರಸಿ ನಪ್ಪಿನ್ನೆ ಶ್ರೀದೇವಿಯ ಅಂಶಸಂಭೂತೆ! ನಿನ್ನ ಶಯನದಿಂದ ಎಚ್ಚರಗೊಂಡು ಬಾರಮ್ಮ. ಬೀಸಣಿಗೆ ಕನ್ನಡಿ ಮುಂತಾದ ಪರಿಕರಗಳನ್ನು ಅಣಿಮಾಡಿಕೊಂಡು ಬಂದು ನಿನ್ನ ವಲ್ಲಭನಾದ ಶ್ರೀಕೃಷ್ಣನನ್ನು ಎಬ್ಬಿಸಿ, ಅವನೊಡನೆ ನಮ್ಮ ಮಂಗಳ ಮಜ್ಜನಕ್ಕೆ ಅನುಕೂಲ ಮಾಡಿಕೊಡಮ್ಮ; ಅವನ ಕಟಾಕ್ಷ ಪ್ರವಾಹದಲ್ಲಿ ನಮಗೆ ಸ್ನಾನಮಾಡಿಸಬೇಕಮ್ಮ ನೀನು. ಆಗ ನಮ್ಮ ವ್ರತವು ಸಿದ್ಧಿಸುತ್ತದೆ, ಎಂದು ಗೋದಾದೇವಿ ನಪ್ಪಿನ್ನೆಯನ್ನು ಪ್ರಾರ್ಥಿಸುತ್ತಾಳೆ.

(ಸಶೇಷ)



# A HEALING TOUCH

## T. T. DEVASTHANAMS INTRODUCES SRI BALAJI AROGYAVARAPRASADINI SCHEME

For ages, Tirumala, the abode of Lord Venkateswara, has been a great centre of pilgrimage. Thousands of devotees visit the sacred hills every day and offer their solemn prayers to the Lord for their spiritual and physical well-being.

Alleviating human suffering has been a part of dedicated efforts of TTD to the mankind. TTD already manages a Leprosorium, centre for physically handicapped, a poor home and also a central hospital. To provide the most advanced medical technology to the needy, the TTD has launched another monument, a blessing from the Lord by opening Sri Venkateswara Institute of Medical Sciences -- a sophisticated super speciality centre on the lines of AIIMS of New Delhi & JIMPER of Pondicherry and PGI of Chandigarh. Total well being of man is the aim of Sri Venkateswara Institute of Medical Sciences, which apart from offering service, training and education in medical sciences, also encourages Research and development.

The doors to such a state of the art technology should be open to our poor and disabled brethren.

With a view to achieving this, Sri Venkateswara Institute of Medical Sciences has introduced a New scheme Balaji Arogyavaraprasadini Scheme. To accomplish the goal of proving the sophisticated medical technology to every individual at an affordable rate, we invite the generous co-operation of philanthropists and the general public.

### The Scheme in essence:

A donor can make an endowment of Rs. 1000/- or multiples thereof / Rs. 1 lakh / Rs. 5 lakhs / Rs. 10 lakhs to T.T. Devasthanams which will in turn contribute matching grant. The entire amount will be deposited in fixed deposit in a nationalised Bank and the interest accrued on it will be utilised for providing free medical services to the poor and the needy.

A Chair in Sri Venkateswara Institute of Medical Sciences will be named after the donor who contributes Rs. 10 lakhs or above. These endowment chairs are purely research oriented.

- Donations can be made by any individual / family / company / firms etc.
- The name of the donor who endows Rs. 5 lakhs or more will be displayed prominently in the Reception hall of the hospital.
- The discharge ticket of the benefited patient will carry the name of the donor.

### Additional Benefit and facilities :

- Donations to Sri balaji Arogyavaraprasadini Scheme are exempted from Income Tax under 80 (G)
- Paid rooms / Air conditioned rooms will be allotted to family members of the donor in the hospital.
- Paid rooms can be named after donors who contribute a sum of Rs. 5 lakhs or above.
- By paying Rs. 5 lakhs and above, a donor may sponsor one operation per year.
- Donors can sponsor feeding of the In-patients and out-patients. They may also sponsor a travel fellowship for the faculty per year.

All donations, by D.Ds. drawn in favour of The Executive Officer, T.T. Devasthanams, Tirupati-517 501 (Andhra Pradesh) should reach the Director, Sri Venkateswara Institute of Medical Sciences, Tirupati along with the following particulars.

- Name and address along with the latest passport-size photographs of the family members of the donor who contributes Rs. 1 lakh or more.
- Name and address of the person to whom Income Tax Exemption Certificate is to be issued.

The donors are also welcome to offer equipment, vehicles etc. to SVIMS or even sponsor health camps in rural areas, if they so desire. Further details can be had from

**The Executive Officer**
**T.T. Devasthanams, Tirupati**
**or**
**The Director**
**Sri Venkateswara Institute of Medical Sciences, Tirupati**

**EXECUTIVE OFFICER**



# SAPTHAGIRI 1996



## JANUARY

| SUN | MON | TUE | WED | THU | FRI | SAT |
|---|---|---|---|---|---|---|
| * | 1 | 2 | 3 | 4 | 5 | 6 |
| 7 | 8 | 9 | 10 | 11 | 12 | 13 |
| 14 | 15 | 16 | 17 | 18 | 19 | 20 |
| 21 | 22 | 23 | 24 | 25 | 26 | 27 |
| 28 | 29 | 30 | 31 | * | * | * |

## FEBRUARY

| SUN | MON | TUE | WED | THU | FRI | SAT |
|---|---|---|---|---|---|---|
| * | * | * | * | 1 | 2 | 3 |
| 4 | 5 | 6 | 7 | 8 | 9 | 10 |
| 11 | 12 | 13 | 14 | 15 | 16 | 17 |
| 18 | 19 | 20 | 21 | 22 | 23 | 24 |
| 25 | 26 | 27 | 28 | 29 | * | * |

## MARCH

| SUN | MON | TUE | WED | THU | FRI | SAT |
|---|---|---|---|---|---|---|
| 31 | * | * | * | * | 1 | 2 |
| 3 | 4 | 5 | 6 | 7 | 8 | 9 |
| 10 | 11 | 12 | 13 | 14 | 15 | 16 |
| 17 | 18 | 19 | 20 | 21 | 22 | 23 |
| 24 | 25 | 26 | 27 | 28 | 29 | 30 |

## APRIL

| SUN | MON | TUE | WED | THU | FRI | SAT |
|---|---|---|---|---|---|---|
| * | 1 | 2 | 3 | 4 | 5 | 6 |
| 7 | 8 | 9 | 10 | 11 | 12 | 13 |
| 14 | 15 | 16 | 17 | 18 | 19 | 20 |
| 21 | 22 | 23 | 24 | 25 | 26 | 27 |
| 28 | 29 | 30 | * | * | * | * |

## MAY

| SUN | MON | TUE | WED | THU | FRI | SAT |
|---|---|---|---|---|---|---|
| * | * | * | 1 | 2 | 3 | 4 |
| 5 | 6 | 7 | 8 | 9 | 10 | 11 |
| 12 | 13 | 14 | 15 | 16 | 17 | 18 |
| 19 | 20 | 21 | 22 | 23 | 24 | 25 |
| 26 | 27 | 28 | 29 | 30 | 31 | * |

## JUNE

| SUN | MON | TUE | WED | THU | FRI | SAT |
|---|---|---|---|---|---|---|
| 30 | * | * | * | * | * | 1 |
| 2 | 3 | 4 | 5 | 6 | 7 | 8 |
| 9 | 10 | 11 | 12 | 13 | 14 | 15 |
| 16 | 17 | 18 | 19 | 20 | 21 | 22 |
| 23 | 24 | 25 | 26 | 27 | 28 | 29 |

## JULY

| SUN | MON | TUE | WED | THU | FRI | SAT |
|---|---|---|---|---|---|---|
| * | 1 | 2 | 3 | 4 | 5 | 6 |
| 7 | 8 | 9 | 10 | 11 | 12 | 13 |
| 14 | 15 | 16 | 17 | 18 | 19 | 20 |
| 21 | 22 | 23 | 24 | 25 | 26 | 27 |
| 28 | 29 | 30 | 31 | * | * | * |

## AUGUST

| SUN | MON | TUE | WED | THU | FRI | SAT |
|---|---|---|---|---|---|---|
| * | * | * | * | 1 | 2 | 3 |
| 4 | 5 | 6 | 7 | 8 | 9 | 10 |
| 11 | 12 | 13 | 14 | 15 | 16 | 17 |
| 18 | 19 | 20 | 21 | 22 | 23 | 24 |
| 25 | 26 | 27 | 28 | 29 | 30 | 31 |

## SEPTEMBER

| SUN | MON | TUE | WED | THU | FRI | SAT |
|---|---|---|---|---|---|---|
| 1 | 2 | 3 | 4 | 5 | 6 | 7 |
| 8 | 9 | 10 | 11 | 12 | 13 | 14 |
| 15 | 16 | 17 | 18 | 19 | 20 | 21 |
| 22 | 23 | 24 | 25 | 26 | 27 | 28 |
| 29 | 30 | * | * | * | * | * |

## OCTOBER

| SUN | MON | TUE | WED | THU | FRI | SAT |
|---|---|---|---|---|---|---|
| * | * | 1 | 2 | 3 | 4 | 5 |
| 6 | 7 | 8 | 9 | 10 | 11 | 12 |
| 13 | 14 | 15 | 16 | 17 | 18 | 19 |
| 20 | 21 | 22 | 23 | 24 | 25 | 26 |
| 27 | 28 | 29 | 30 | 31 | * | * |

## NOVEMBER

| SUN | MON | TUE | WED | THU | FRI | SAT |
|---|---|---|---|---|---|---|
| * | * | * | * | * | 1 | 2 |
| 3 | 4 | 5 | 6 | 7 | 8 | 9 |
| 10 | 11 | 12 | 13 | 14 | 15 | 16 |
| 17 | 18 | 19 | 20 | 21 | 22 | 23 |
| 24 | 25 | 26 | 27 | 28 | 29 | 30 |

## DECEMBER

| SUN | MON | TUE | WED | THU | FRI | SAT |
|---|---|---|---|---|---|---|
| 1 | 2 | 3 | 4 | 5 | 6 | 7 |
| 8 | 9 | 10 | 11 | 12 | 13 | 14 |
| 15 | 16 | 17 | 18 | 19 | 20 | 21 |
| 22 | 23 | 24 | 25 | 26 | 27 | 28 |
| 29 | 30 | 31 | * | * | * | * |

## TIRUMALA TIRUPATI DEVASTHANAMS

# Sri Venkateswara Vanabhivriddhi Scheme

## An Appeal . . .

*He that planteth a tree is the servant of God*
*And Provideth a kindness for many generation*
*And faces that he, hath not seen shall bless him*

Sacred Forests of Tirumala are the precious gift of Lord Venkateswara to mankind. With a view to safeguarding its unique yet delicate ecological condition, Tirumala Tirupati Devasthanams have introduced a series of exciting schemes called **Sri Venkateswara Vanabhivriddhi Schemes**. The Schemes seek to provide a rare opportunity to the public for participation in a massive plantation project implemented by the Forest Department of T.T. Devasthanams.

The salient features of Sri Venkateswara Vanabhivriddhi Schemes are:

**VRIKSHA SAMVARDHANAM :** Under this Scheme, about one acre of land will be brought under plantation.

**Benefits :**

- Plantation will be named after the donor or person of his choice.
- Every year free accommodation on 2 ordinary days at Tirumala for 10 years.
- One paid special darshan every year for 5 persons for 10 years.

**Donation :** Rs. 15,000.

**VRIKSHA PRASADAM :** The Scheme is proposed for raising 100 fruit and flowering seedling every year.

**Benefits :**

- Distribution of one hundred seedlings, both fruit bearing and flowering in the donor's name every year.
- Two days free stay at Tirumala every year on any ordinary days for 10 years.
- One paid special darshan every year for five persons for 10 years.

**Donation :** Rs. 10,000.

**SMARAKA VANALU :** Under this scheme 10 saplings of selected species will be planted in a grove and maintained for five years.

**Benefits :**

- The grove will be named after the donor.
- Every year paid special darshan for five persons for five years.

**Donation :** Rs. 2,000.

**VANA SAMRAKSHANA BHAGA SWAMYAM :** is proposed to protect and improve the natural forest cover on Tirumala hills.

**Benefits :**

- Diplay of the donor's name.
- Paid special darshan for five persons for one year.

**Donation :** Rs. 1,000.

**ADHYAYANA VANALU :** Plantation and maintenance of a variety of species will be taken up under this scheme in the proposed botonical garden at Tirumala.

**Benefits :**

- Display of donor's name near the plant.

**Donation :** Rs. 500.

**VRIKSHA DATTATA :** is a bold scheme featuring adoption and plantation of avenue trees on the ghat road and at Tirumala.

**Benefits :**

- Display of donor's name.

**Donation :** Rs. 250.

We appeal to all devotees to donate liberally and help us to preserve the priceless forest wealth of Tirmala - The Abode of LORD VENKATESWARA.

Please send your donations by Demand draft to the **The Executive Officer, T. T. Devasthanams, TIRUPATI - 517 507.**

**EXECUTIVE OFFICER**

# ವಿಹಿತಕರ್ಮಮಾಡು

ಶ್ರೀನಿವಾಸಮಠದ

ಪುರಂದರದಾಸರು ಮಾನವ ಜನಾಂಗದ ಉದ್ಧಾರವನ್ನು ಮನದಲ್ಲಿಟ್ಟು - ವೇದ, ಉಪನಿಷತ್ತುಗಳ ಸಾರವನ್ನೇ ತಮ್ಮ ಪದ ಪದ್ಯಗಳಲ್ಲಿ ಹೆಣೆದು ಮಹೋಪಕಾರಮಾಡಿದ ಮಹನೀಯರು. ಮಾನವ ಜನ್ಮಹೊಂದಿದ ಜೀವರು ತಮ್ಮ ಜೀವಿತ ಕಾಲದಲ್ಲಿ ಭಗವಂತನನ್ನು ಆರಾಧಿಸಿ ಸನ್ಮಾರ್ಗದಲ್ಲಿ ಮುನ್ನಡೆದು ಕೈವಲ್ಯಮಾರ್ಗದತ್ತ ಸಾಗಬೇಕು. ಹೀಗೆ ಮಾಡಬೇಕಾದರೆ ಅವನ ಕರ್ತವ್ಯಗಳೇನು? ಯಾವುದರಿಂದ ಅವನು ತನ್ನ ಗುರಿ ಸಾಧಿಸಬಲ್ಲ - ಇವೇ ಮೊದಲಾದ ತತ್ವಗಳನ್ನು ದಾಸರು ಪ್ರಸ್ತುತ ಪದ್ಯದಲ್ಲಿ ಚೆನ್ನಾಗಿ ತಿಳಿಸಿಕೊಟ್ಟು ಉದ್ಧರಿಸಿದ್ದಾರೆ. ಈ ಪದ್ಯದ ಚಿಕ್ಕ ವಿವೇಚನೆ ಇಲ್ಲಿದೆ--

ವಿಷಯ ವಿಚಾರವ ಬಿಡು
ವಿಹಿತಕರ್ಮವ ಮಾಡು
ವೈರಾಗ್ಯ ಭಾಗ್ಯ ಬೇಡು || ಪ ||

ಇಲ್ಲಿ ದಾಸರು ಅನ್ನಾದಿ ಕಾಮೋಪಭೋಗ ವಿಷಯಗಳನ್ನು ತ್ಯಜಿಸಿ ವಿಹಿತವಾದ ಕರ್ಮಗಳನ್ನು ಮಾಡುತ್ತ ವೈರಾಗ್ಯ ಭಾಗ್ಯವನ್ನು ಆ ಭಗವಂತನಲ್ಲಿ ಬೇಡಬೇಕೆಂದು ತಿಳಿಸಿದ್ದಾರೆ.

ವಿಷಯಾಭಿಲಾಷೆಯುಳ್ಳ ಜೀವರಿಗೆ ಅವರು ಮಾಡುವ ಕರ್ಮಗಳು ಬಹುಕ್ಲೇಶಕರಗಳಾಗಿರುತ್ತವೆ. ಅಲ್ಪಸುಖವನ್ನು ಮಾತ್ರ ಕೊಡುತ್ತವೆ. ಅನೇಕ ವೇಳೆ ಅನರ್ಥಗಳನ್ನು ತಂದೊಡ್ಡುತ್ತವೆ. ಕಾರಣ ವಿಷಯ ವಿಚಾರವನ್ನು ಬಿಟ್ಟು ಸರ್ವೋತ್ತಮನಾದ ಭಗವಂತನನ್ನು ಭಜಿಸಬೇಕು. ಹೀಗೆ ಮಾಡಿದರೆ ಮಾತ್ರ ಜೀವರು ಸಂಸಾರ ಬಂಧನದಿಂದ ಪಾರಾಗಬಲ್ಲರು.

ಉಪನಿಷತ್ತಿನಲ್ಲಿ ಹೀಗೆ ತಿಳಿಸಿದ್ದಾರೆ.

ಕಾಮಾನ್ಯಃ ಕಾಮಯತೇ ಮನ್ಯಮಾನಃ
ಸಕಾಮ ಭಿರ್ಜಾಯತೇ ತತ್ರ ತತ್ರ
ಪರ್ಯಾಪ್ತ ಕಾಮಸ್ಯ ಕೃತಾತ್ಮನಸ್ತ
ಇಹೈವ ಸರ್ವೇ ಪ್ರವಿಲೀಯಂತಿ ಕಾಮಾಃ

ವಿಷಯ ಪದಾರ್ಥಗಳನ್ನೇ ಹಿತವೆಂದು ಬಗೆದು ಅವುಗಳನ್ನು ಪುನಃ ಪುನಃ ಹೊಂದಲು ಪರಮಾತ್ಮನನ್ನು ಉಪಾಸನೆ ಮಾಡುವವನು ವಿಷಯ ಭೋಗಗಳಿಂದ ಕೂಡಿದ ಲೋಕಗಳಲ್ಲಿ ಮತ್ತೆ ಮತ್ತೆ ಜನ್ಮ ಪಡೆಯುವನು. ವಿಷಯ ಪದಾರ್ಥಗಳು ಇನ್ನು ಸಾಕೆಂದು ತೃಪ್ತವಾದ ಮನಸ್ಸುಳ್ಳ ಉಪಾಸಕನಿಗೆ ಅಪರೋಕ್ಷಜ್ಞಾನವಾದ ಕೂಡಲೇ ವೈಷಯಿಕ ಸುಖಗಳಲ್ಲಿ ಅಭಿಲಾಷೆಯು ಸಂಪೂರ್ಣವಾಗಿ ನಿವೃತ್ತವಾಗುತ್ತದೆ. ಈ ಕಾರಣದಿಂದ ವಿಷಯ ವಿಚಾರವ ಬಿಡು ಎಂದು ದಾಸರು ಹೇಳಿರುವುದು ಸಾರ್ಥಕವೇ ಆಗಿದೆ.

ವಿಷಯಗಳ ವಿಚಾರವು ಭಗವಂತನ ವಿಸ್ಮರಣೆಯನ್ನೇ ಉಂಟುಮಾಡುತ್ತದೆಂದು ಮಹಾಭಾರತದಲ್ಲಿ ಹೀಗೆ ತಿಳಿಸಿರುವರು.

ವಿಷಯೇಷು ಚ ಸಂಸರ್ಗಾತ್
ಶಾಶ್ವತಸ್ಯ ಚ ಸಂಶಯಾತ್
ಮನಸಾ ಚಾನ್ಯಥಾ ಕಾಂಕ್ಷಾತ್
ಪರನ್ನ ಪ್ರತಿ ಪದ್ಯತೇ

ವಿಷಯಗಳ ಸಂಸರ್ಗದಿಂದ ಮನಸ್ಸು ವಿಷಯಗಳಲ್ಲಿಯೇ ಸರ್ವದಾ ಆಸಕ್ತವಾಗುವುದರಿಂದ ವಿಷಯಾಪೇಕ್ಷೆಯು ಹೆಚ್ಚುತ್ತ ಆ ಭಗವಂತನ ವಿಸ್ಮರಣೆಯು ಉಂಟಾಗುತ್ತದೆ.

ಇದನ್ನೇ ಭಾಗವತದಲ್ಲಿ ಹೀಗೆ ನಿರೂಪಿಸಿರುವರು--

ವಿಷಯಾನ್ ಧ್ಯಾಯತಃ ಚಿತ್ತಂ
ವಿಷಯೇಷು ವಿಷಜ್ಜತೇ
ಮಾಮನುಸ್ಮರತಶ್ಚಿತ್ತಂ
ಮಯ್ಯೇವ ಪ್ರವಿಲೀಯತೇ (11-14-29)

ಮತ್ತೂ, "ನಾಸ್ತಿ ರಾಗ ಸಮಂ ದುಃಖಂ" ಎಂಬ ನಾರದ ಮಹಾಪುರಾಣದ ಉಕ್ತಿಯಂತೆ - ವಿಷಯಗಳಲ್ಲಿ ಮಾಡುವ ಆಸಕ್ತಿಗೆ ಸಮಾನವಾದ ದುಃಖವು ಇನ್ನೊಂದಿಲ್ಲ. ಕಾರಣ ವಿಷಯಗಳ ವಿಚಾರವನ್ನು ಬಿಡಬೇಕಾದುದು ಪ್ರತಿಯೊಬ್ಬರ ಕರ್ತವ್ಯವೇ ಆಗಿದೆ.

ಭಗವದ್ಗೀತೆಯಲ್ಲಿ ಹೀಗೆ ತಿಳಿಸಿದ್ದಾರೆ--

ಧ್ಯಾಯತೋ ವಿಷಯಾನ್ ಪುಂಸಃ
ಸಂಗಸ್ತೇಷೂಪಜಾಯತೇ
ಸಂಗಾತ್ ಸಂಜಾಯತೇ ಕಾಮಃ
ಕಾಮಾತ್ ಕ್ರೋಧೋಭಿಜಾಯತೇ
ಕ್ರೋಧಾದ್ಭವತಿ ಸಮ್ಮೋಹಃ
ಸಮ್ಮೋಹಾತ್ ಸ್ಮೃತಿ ವಿಭ್ರಮಃ
ಸ್ಮೃತಿ ಭ್ರಂಶಾತ್ ಬುದ್ಧಿನಾಶೋ
ಬುದ್ಧಿ ನಾಶಾತ್ ಪ್ರಣಶ್ಯತಿ (2-63)

ಗಂಧ, ರೂಪಗಳೇ ಮೊದಲಾದ ಲೌಕಿಕ ಅನಿತ್ಯ ವಿಷಯಗಳ ಧ್ಯಾನವನ್ನು ಸರ್ವದಾ ಮಾಡುವುದರಿಂದ ಪರಂಪರೆಯಾದ ನರಕಾದ್ಯನರ್ಥಗಳು ಉಂಟಾಗುವುದರಿಂದ ಮುಮುಕ್ಷುಗಳು ವಿಷಯಗಳ ಧ್ಯಾನವನ್ನು ಬಿಟ್ಟು ಭಗವಂತನ ಧ್ಯಾನವನ್ನು ಮಾಡಬೇಕು.

ಭಾಗವತದಲ್ಲಿ ಹೀಗೆ ತಿಳಿಸಿದ್ದಾರೆ --

ಗುಣೇಷು ಚಾ ಪಿಶೇಚ್ಚಿತ್ತಂ
ಅಭೀಕ್ಷ್ಣಂ ಗುಣಸೇವಯಾ
ಗುಣಾಶ್ಚ ಚಿತ್ತಪ್ರಭವಾ
ಮದ್ರೂಪ ಉಭಯಂ ತ್ಯಜೇತ್ (11-13-26)

ಮೇಲಿಂದ ಮೇಲೆ ವಿಷಯಗಳ ಸೇವನೆ ಮಾಡುವದರಿಂದ ಚಿತ್ತವು ಸದಾ ವಿಷಯಗಳಲ್ಲಿಯೇ ಆಸಕ್ತವಾಗುತ್ತದೆ. ವಿಷಯಗಳು ಮನಸ್ಸಿನಲ್ಲಿಯೇ ನೆಲೆಗೊಳ್ಳುತ್ತವೆ. ಈ ವಿಷಯಗಳನ್ನು ಮತ್ತು ಮನಸ್ಸನ್ನು ಭಗವಂತನಲ್ಲಿಯೇ ಸಮರ್ಪಣೆ ಮಾಡಬೇಕು.

ವಿಷಯಗಳ ವಿಚಾರವನ್ನು ಏಕೆ ಬಿಡಬೇಕೆಂಬುದನ್ನು ಕಠೋಪನಿಷತ್ತಿನಲ್ಲಿ ಹೀಗೆ ತಿಳಿಸಿರುವರು --

ಪರಾಚಃ ಕಾಮಾನನುಯಂತಿ ಬಾಲಾಃ
ತೇ ಮೃತ್ಯೋರ್ಯಂತಿ ವಿತತಸ್ಯಪಾಶಂ
ಅಥ ಧೀರಾಃ ಅಮೃತತ್ವಂ ವಿದಿತ್ವಾ
ಧ್ರುವಮಧ್ರುವೇಷ್ವಿಹ ನ ಪ್ರಾರ್ಥಯಂತೇ
(2-2)

ಯಾರು ಅವಿವೇಕಿಗಳಾಗಿ ಬಾಹ್ಯ ವಿಷಯ ಭೋಗ ಪದಾರ್ಥಗಳ ಬೆನ್ನುಹತ್ತುವರೋ - ಅವರು ಬಹುಕಾಲದವರೆಗೆ ಇರುವ ಅಜ್ಞಾನದ (ಸಂಸಾರದ) ಬಂಧನವನ್ನು ಪಡೆಯುತ್ತಾರೆ. ಅದರಿಂದಾಗುವ ದುಃಖವನ್ನು ಅನುಭವಿಸುತ್ತಾರೆ. ಆದ್ದರಿಂದ ಈ ಲೋಕದಲ್ಲಿ ವಿವೇಕಿಗಳಾದವರು ಮೋಕ್ಷವನ್ನು ಶಾಶ್ವತವೆಂದು ತಿಳಿದು ನಶ್ವರವಾದ ಲೌಕಿಕ ವಿಷಯ ಸುಖಗಳನ್ನು ಬಯಸುವುದೇ ಇಲ್ಲ.

ಅಚಲಾನಂದದಾಸರು ಹೇಳಿದ ಮಾತನ್ನು ಇಲ್ಲಿ ನೆನೆಪಿಸಿಕೊಳ್ಳಬಹುದು--

ವಿಷಯ ವ್ಯಳ್ಯವನಿಗೆ ವಿವೇಕವಿಲ್ಲ
ಹಸಿವೆ ಅರಿತು ಉಂಬನಿಗೆ ರೋಗವಿಲ್ಲ
ಲೋಭಿಗೆ ತನ್ನವರೆಂಬೋರಿಲ್ಲ
ಚ್ಯುತ ಶೀಲ ಗುಣಗೆ ಸತ್ವವಿಲ್ಲ

ಕೇಳಯ್ಯ ದೇವ ಅಚಲಾನಂದ ವಿಠಲ
ನಿನ್ನ ನೆನೆಯದವ ಪಾಮರನಯ್ಯ

ಇನ್ನು 'ವಿಹಿತ ಕರ್ಮವ ಮಾಡು' ಎಂದಿದ್ದಾರೆ ದಾಸರು ಇದರ ಔಚಿತ್ಯ ಹೀಗಿದೆ --

ಸ್ವಕರ್ಮಣಾ ತಮಭ್ಯರ್ಚ್ಯ
ಸಿದ್ಧಿಂ ವಿಂದತಿ ಮಾನವಃ
ಗೀತಾ (18-46)

ಸ್ವವರ್ಣಾಶ್ರಮ ವಿಹಿತಕರ್ಮಗಳನ್ನು ಮಾಡಿ ಭಗವಂತನನ್ನು ಪೂಜಿಸಿ ಮಾನವನು ಮೋಕ್ಷವನ್ನು ಹೊಂದುತ್ತಾನೆ.

"ನಿಯತಂ ಕುರು ಕರ್ಮ ತ್ವಂ" ಎಂಬ ಗೀತಾ ವಾಕ್ಯವು ಕೂಡ ಸ್ವವರ್ಣಾಶ್ರಮ ವಿಹಿತವಾದ ಕರ್ಮಗಳನ್ನು ಮಾಡು ಎಂಬುದಾಗಿ ಬೋಧಿಸುತ್ತದೆ.

ಇದನ್ನೇ ಶ್ರೀಮದಾನಂದತೀರ್ಥ ಭಗತ್ಪಾದರು "ಕುರುಭುಂಕ್ಷ ಚ ಕರ್ಮ ನಿಜಂ ನಿಯತಂ" ಎಂದಾಗಿ ಹೇಳಿರುವುದನ್ನು ಇಲ್ಲಿ ಸ್ಮರಿಸಬೇಕು -

ಈಶಾವಾಸ್ಯೋಪನಿಷತ್ತಿನಲ್ಲಿ ಕೂಡ--

"ಕುರ್ವನ್ನೇವೇಹ ಕರ್ಮಾಣಿ
ಜಿಜೀವಿಷೇತ್ ಶತಂ ಸಮಾಃ"

ಎಂಬಂತೆ ಈ ಮಾನುಷಜನ್ಮದಲ್ಲಿ ಸ್ವವರ್ಣಾಶ್ರಮೋಚಿತವಾದ ಕರ್ಮಗಳನ್ನು ಮಾಡುತ್ತಲೇ ನೂರು ವರ್ಷಗಳ ಕಾಲ ಬದುಕಲು ಇಚ್ಛಿಸಬೇಕೆಂದು ತಿಳಿಸಲಾಗಿದೆ.

ಇನ್ನು "ವೈರಾಗ್ಯ ಭಾಗ್ಯಬೇಡು" ಎಂದಿದ್ದಾರೆ ದಾಸರು. ಇವರ ಔಚಿತ್ಯ ಹೀಗಿದೆ --

"ಗುಣೇಷ್ವಸಂಗೋ ವೈರಾಗ್ಯಮ್" ಎಂಬಂತೆ (ಶ್ರೀಮದ್‌ಭಾಗವತ 11-19-27)

-ವಿಷಯ ಸುಖಗಳಲ್ಲಿ ಅಪೇಕ್ಷೆಯನ್ನು (ಇಚ್ಛೆಯನ್ನು) ಬಿಡುವುದಕ್ಕೆ "ವೈರಾಗ್ಯ" ವೆನ್ನುತ್ತಾರೆ - ಭಾಗವತ - ಸಾರೋದ್ಧಾರದಲ್ಲಿ ವಿಷ್ಣುತೀರ್ಥ ಶ್ರೀಪಾದಂಗಳವರು - "ರಾಗ ನಿವೃತ್ತಿರೂಪಂ ವೈರಾಗ್ಯಭಾಗ್ಯಮ್" ಎಂದಿರುವುದನ್ನು ಇಲ್ಲಿ ಸ್ಮರಿಸಬೇಕು -- ಗ್ರಾಮ್ಯ ಸುಖಗಳಲ್ಲಿ ಅಪೇಕ್ಷೆ, ಸ್ನೇಹ ಹೊಂದದಿರುವುದೇ ವೈರಾಗ್ಯಭಾಗ್ಯವೆನಿಸುತ್ತದೆ.

ಭರ್ತೃಹರಿಯ ಮಾತೊಂದನ್ನು ಇಲ್ಲಿ ನೆನೆಸಿಕೊಳ್ಳಬೇಕು.

ಭೋಗೇ ರೋಗಭಯಂ ಕುಲೇ
ಚ್ಯುತಿಭಯಂ ವಿತ್ತೇನೃಪಾಲಾದ್ಭಯಂ
ಮೌನೇ ದೈನ್ಯಭಯಂ ಬಲೇ
ರಿಪುಭಯಂ ರೂಪೇ ಜರಾಯಾಭಯಮ್
ಶಾಸ್ತ್ರೇ ವಾದಭಯಂ
ಗುಣೇ ಖಲಭಯಂ ಕಾಯೇ ಕೃತಾಂತಾದ್ಭಯಂ
ಸರ್ವಂ ವಸ್ತು ಭಯಾನ್ವಿತಂ
ಭುವಿನೃಣಾಂ 'ವೈರಾಗ್ಯ' ಮೇವ ಅಭಯಮ್
(ವೈರಾಗ್ಯಶತಕ - 36)

ವಿಷಯ ಭೋಗಗಳಲ್ಲಿ ರೋಗದ ಭಯವಿದೆ ಸತ್ಕುಲದಲ್ಲಿ ಹುಟ್ಟಿದವರಿಗೆ ಸನ್ಮಾರ್ಗಚ್ಯುತಿ ಭಯವಿದೆ. ಹಣವು ಹೆಚ್ಚಿದಲ್ಲಿ ರಾಜರಿಂದ ಭಯವಿದೆ. ಮೌನವಾಗಿದ್ದರೆ ದೀನನೆಂಬ ಅಪಹಾಸ್ಯದ ಭಯ, ಬಲವಿದ್ದಲ್ಲಿ ಶತ್ರುಗಳ ಭಯ, ಶಾಸ್ತ್ರಪಾಂಡಿತ್ಯವಿದ್ದಲ್ಲಿ ಇನ್ನೊಬ್ಬ ಪಂಡಿತನಿಂದ ಪರಾಜಯದ ಭಯ, ಗುಣಾಢ್ಯನಾಗಿದ್ದರೆ ದುಷ್ಟರಿಂದ ನಿಂದೆಯ ಭಯ, ದೇಹಕ್ಕೆ ಯಮರಾಜನಿಂದ ಭಯ, ಹೀಗೆ ಈ ಪ್ರಪಂಚದಲ್ಲಿ ಎಲ್ಲವೂ ಭಯಪೀಡಿತವಾಗಿದೆ -- "ವೈರಾಗ್ಯ"ವೊಂದೇ ಅಭಯ (ಭಯರಹಿತವಾಗಿದೆ).

ಭಾಗವತದಲ್ಲಿ ಹೀಗೆ ಹೇಳುತ್ತಾರೆ--

ಕುತ್ರಾಶಿಷಃ ಶ್ರುತಿಸುಖಾ ಮೃಗತೃಷ್ಣರೂಪಾಃ
ಕ್ವೇದಂ ಕಲೇವರ ಮಶೇಷರುಜಾಂ ವಿರೋಹಂ

ನಿರ್ವಿದ್ಯತೇ ನ ತು ಜನೋ ಯದಪೀತಿ ವಿದ್ವಾನ್
ಕಾಮಾನಲಂ ಸುಖವಿವೈಃ ಶಮಯನ್
ದುರಾಪೈಃ (7-9-95)

ವೈಷಯಿಕ ಸುಖಗಳು ಮೃಗ ಜಲದಂತೆ ಇರುವುದಾಗಿ ತಿಳಿಯಬೇಕು. ಇವುಗಳಿಂದ ಕರ್ಣಾನಂದ ಇತ್ಯಾದಿ ದೊರೆಯುವುದೇ ಹೊರತು ಅಪೇಕ್ಷಿತವಾದ ಸುಖವು ದೊರೆಯುವುದೇ ಇಲ್ಲ. ಮಾನವ ದೇಹವು ಅಶೇಷ ರೋಗಗಳಿಗೆ ಉಗಮಸ್ಥಾನವಾಗಿದೆ. ಹೀಗಿರುವುದನ್ನು ತಿಳಿದು ವಿಷಯ ಸುಖಗಳೆಂಬ ಸಣ್ಣಬಿಂದುಗಳಿಂದ ಕಾಮವೆಂಬ ಅಗ್ನಿಯನ್ನು ಶಾಂತಗೊಳಿಸಲು ವಿದ್ವಾಂಸರು ಪ್ರಯತ್ನಿಸುತ್ತಾರೆ, ವೈರಾಗ್ಯವನ್ನು ಹೊಂದುವುದಿಲ್ಲ. ಅಂದರೆ ವಿಷಯ ಸುಖಗಳು ಅನಿತ್ಯವೆಂದು ತಿಳಿದು ವೈರಾಗ್ಯವನ್ನು ಹೊಂದಬೇಕು ಎಂಬುದು - ಭಾಗವತಕಾರರ ಖಚಿತ ಅಭಿಪ್ರಾಯವಾಗಿದೆ.

ಇನ್ನೊಂದು ಪ್ರಸಂಗದಲ್ಲಿ ಭಗವಂತನಲ್ಲಿ ಭಕ್ತಿ ವಿಷಯಗಳಲ್ಲಿ ವೈರಾಗ್ಯ ಇವು ಅವಶ್ಯಕವಾಗಿವೆಯೆಂದು ತಿಳಿಸುವ ಪರಿ ಹೀಗಿದೆ--

ಶಾಸ್ತ್ರೇಷ್ವಿಯಾನೇವ ಸುನಿಶ್ಚಿತೋ ನೃಣಾಂ
ಕ್ಷೇಮಸ್ಯ ಸಮ್ಯಗ್ವಿಮೃಶೇಷು ಹೇತುಃ
ಅಸಂಗ ಆತ್ಮವ್ಯತಿರಿಕ್ತ ವಸ್ತುನಿ-
ದೃಢಾ ರತಿರ್ಬ್ರಹ್ಮಣಿ ನಿರ್ಗುಣೇಚಯಾ
(4-22-21)

ಭಗವಂತನ ವ್ಯತಿರಿಕ್ತ ವಸ್ತುಗಳಾದ ವಿಷಯ ಪದಾರ್ಥಗಳಲ್ಲಿ ವೈರಾಗ್ಯ, ಪ್ರಾಕೃತಗುಣ ರಹಿತನಾದ ಭಗವಂತನಲ್ಲಿ ದೃಢವಾದ ಭಕ್ತಿ ಇವುಗಳು ಮಾನವರ ಶ್ರೇಯಸ್ಸಿಗೆ ಕಾರಣಗಳಾಗಿವೆ ಎಂದಾಗಿ ಸರ್ವಶಾಸ್ತ್ರಗಳ ವಿಮರ್ಶೆಯಿಂದ ತಿಳಿದು ಬರುತ್ತದೆ.

ಮನುಷ್ಯನು ವೈರಾಗ್ಯಹೊಂದಿದಾಗ ಮಾತ್ರ ಶಾಶ್ವತ ಸುಖ ಹೊಂದುವದು ಸಾಧ್ಯ ಎಂಬುದನ್ನು ಮಹಾಭಾರತ ಶಾಂತಿ ಪರ್ವದಲ್ಲಿ ತಿಳಿಸಿದ್ದಾರೆ --

ನಿರ್ವಿದ್ಯತಿ ನರಃ ಕಾಮಾನ್
ನಿರ್ವಿದ್ಯ ಸುಖ ಮೇಧತೇ
ತೃಷ್ಣಾಪ್ರೀತಿಂ ಚ ಶೋಕಂ ಚ
ಲಬ್ಧಾಬುದ್ಧಿಮಯಂ ವಸು -

ಯಾವಾಗ ಮನುಷ್ಯನು ಕಾಮಭೋಗಾದಿ ವಿಷಯಗಳಿಂದ ವೈರಾಗ್ಯವನ್ನು ಹೊಂದಿ ವಿರಕ್ತನಾಗುವನೋ ಆಗ ಆ ಮನುಷ್ಯನು ಪ್ರೀತಿ ಶೋಕಗಳೆರಡನ್ನು ತ್ಯಾಗಮಾಡಿ ಜ್ಞಾನಮಯವಾದ ಐಶ್ವರ್ಯವನ್ನು ಪಡೆದುಕೊಂಡು ಜ್ಞಾನದಿಂದ ಭಕ್ತ್ಯಾದಿಗಳನ್ನು ಹೊಂದಿ ಶಾಶ್ವತ ಸುಖವನ್ನು ಹೊಂದುತ್ತಾನೆ.

ಈ ಕಾರಣಗಳಿಂದ ವೈರಾಗ್ಯವನ್ನು ಪ್ರತಿಯೊಬ್ಬರೂ ಹೊಂದಲೇಬೇಕು ಎಂದಾಗಿ ದಾಸರು ಹೇಳುತ್ತಾರೆ.

ವೈರಾಗ್ಯವನ್ನು ಹೊಂದಿದ ಮೇಲೆ ಅಪೇಕ್ಷಿತವೆಂಬುದು (ಭಗವಂತನ ಹೊರತು) ಯಾವುದೂ ಉಳಿಯುವುದೇ ಇಲ್ಲ--

ಭರ್ತೃಹರಿಯ ನೀತಿ ಮಾತನ್ನು ಇಲ್ಲಿ ನೆನೆಸಿಕೊಳ್ಳಬೇಕು--

ಭಕ್ತಿರ್ಭವೇ ಮರಣ ಜನ್ಮಭಯಂ ಹೃದಿಸ್ಥಂ
ಸ್ನೇಹೋ ನ ಬಂಧುಷು ನ ಮನ್ಮಥಜಾ ವಿಕಾರಾಃ
ಸಂಸರ್ಗದೋಷ ರಹಿತಾ ವಿಜನಾ ವನಾಂತಾ
ವೈರಾಗ್ಯ ಮಸ್ತಿ ಕಿಮತಃ ಪರಮರ್ಥನೀಯಂ
(ವೈರಾಗ್ಯ ಶತಕ - 67)

ಕಲ್ಯಾಣಕಾರಿಯಾದ ಭಗವಂತನಲ್ಲಿ ಭಕ್ತಿ ಇರಬೇಕು. ಮರಣ ಮತ್ತು ಜನ್ಮಗಳ ಭಯವು ಹೃದಯದಲ್ಲಿರಬೇಕು. ಬಂಧು ಬಾಂಧವರನ್ನು ಕುರಿತು ಮೋಹವಿರಬಾರದು. ಮನಸ್ಸಿನಲ್ಲಿ ಕಾಮ ವಿಕಾರವಿರಬಾರದು. ಸಂಸರ್ಗದೋಷದಿಂದ ಮುಕ್ತನಾಗಿರಬೇಕು ಹಾಗೂ ನಿರ್ಜನವಾದ ಏಕಾಂತ ವನಗಳಲ್ಲಿ ವಾಸವಾಗಿರಬೇಕು. ಈ ರೀತಿ ವೈರಾಗ್ಯವು ಉದಯಿಸಿದಲ್ಲಿ ಇದಕ್ಕಿಂತ ಹೆಚ್ಚಾದ ಸುಖ ಯಾವುದಿದೆ ? ಯಾವುದೂ ಇಲ್ಲ. ವೈರಾಗ್ಯವೇ ಭಾಗ್ಯವು.

ಶ್ರೀಮದಾನಂದತೀರ್ಥಭಗವತ್ಪಾದರು ತಮ್ಮ ಋಗ್‌ಭಾಷ್ಯವೆಂಬ ಗ್ರಂಥದಲ್ಲಿ ವಿಷಯವಿರಕ್ತಿ, ವಿಹಿತಕರ್ಮಾಚರಣೆ ಇವು ಅವಶ್ಯವೆಂದು ಹೀಗೆ ತಿಳಿಸಿದ್ದಾರೆ.

ಸ್ವಾಧ್ಯಾಯ ಸ್ತತ್ವ ವಿಜ್ಞಾನಂ
ವಿಷ್ಣುಭಕ್ತಿರ್ವಿರಾಗತಾ
ನಿಷಿದ್ಧಕರ್ಮ ಸಂಯೋಗೋ
ತ್ಯಾಗೋ ವಿಹಿತಸ್ಯ ಸದಾಕ್ರಿಯಾ
ಸದಾ ವಿಷ್ಣುಸ್ಮೃತಿಶ್ಚೈವ
ಕೇವಲಂ ಮೋಕ್ಷಸಾಧನಂ
ಏತೈರ್ವಿನಾ ನ ಮೋಕ್ಷಃ ಸ್ಯಾತ್
ಭವೇದೇತೈರಪಿ ಧ್ರುವಂ

ಸ್ವಾಧ್ಯಾಯ, ತತ್ವಜ್ಞಾನ, ವಿಷ್ಣುಭಕ್ತಿ, ವೈರಾಗ್ಯ ನಿಷಿದ್ಧಕರ್ಮತ್ಯಾಗ, ವಿಹಿತ ಕರ್ಮಾಚರಣೆ, ವಿಷ್ಣುಸ್ಮೃತಿ (ಸರ್ವದಾ) ಇವು ಮೋಕ್ಷಕ್ಕೆ ಸಾಧನಗಳು. ಇವಿಲ್ಲದೇ ಮೋಕ್ಷವಿಲ್ಲ.

ವಿಷವೆಂದು ಕಾಮಕ್ರೋಧಗಳೆಲ್ಲ ನೀಡಾಡು
ಮಸಣ ಮನವೆ ಮಾಧವನ ಕೊಂಡಾಡು
|| ಅ.ಪ. ||

ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನು ವಿಷದ ಸಮಾನವೆಂದು ತಿಳಿಯಬೇಕು. ವಿಷ ಕುಡಿದರೆ ಪ್ರಾಣಕ್ಕೆ ಹೇಗೆ ಸಂಚಕಾರ ಬರುವುದೋ ಹಾಗೆ ಕಾಮಕ್ರೋಧಾದಿಗಳಿಂದ ಪ್ರಾಣಕ್ಕೆ ಅಪಾಯವಷ್ಟೇ ಅಲ್ಲ ನರಕಾದಿ ಅನರ್ಥಗಳು ಬರುವುದು ನಿಶ್ಚಿತ. ಈ ಕಾರಣದಿಂದ ನಮ್ಮ ಮಸಣ ಸದೃಶ (ಸ್ಮಶಾನ ಸದೃಶ) ವಾದ ಮನಸ್ಸು ಆ ಲಕ್ಷ್ಮೀಪತಿಯಾದ ಶ್ರೀಹರಿಯನ್ನು ಕೊಂಡಾಡುತ್ತಿರಬೇಕು, ಸ್ತೋತ್ರಮಾಡುತ್ತಇರಬೇಕು.

ಭಗವದ್ಗೀತೆ - ಕಾಮಕ್ರೋಧಾದಿಗಳ ವಿಷಯದಲ್ಲಿ ಹೀಗೆ ಎಚ್ಚರಿಸುತ್ತದೆ--

ಕಾಮ ಏಷ ಕ್ರೋಧ ಏಷ
ರಜೋಗುಣ ಸಮುದ್ಭವಃ
ಮಹಾಶನೋ ಮಹಾಪಾಪ್ಮಾ
ವಿದ್ಧ್ಯೇನ ಮಿಹ ವೈರಿಣಂ (3-37)

ತ್ರಿವಿಧಂ ನರಕಸ್ಯೇದಂ
ದ್ವಾರಂ ನಾಶನಮಾತ್ಮನಃ
ಕಾಮಃ ಕ್ರೋಧಸ್ತಥಾ ಲೋಭಃ
ತಸ್ಮಾದೇತ ತ್ರಯಂ ತ್ಯಜೇತ್ (16-21)

ಕಾಮ ಕ್ರೋಧಾದಿಗಳು ರಜೋಗುಣದಿಂದ ಹುಟ್ಟಿದವುಗಳಾಗಿವೆ. ಇವುಗಳು ಪೂರೈಸಲು ಅಸಾಧ್ಯವಾದವುಗಳು. ಮಹಾಪಾಪಕ್ಕೆ ಕಾರಣವಾಗಿವೆ. ಪುರುಷಾರ್ಥ ಸಂಪಾದನೆಯ ವಿಷಯದಲ್ಲಿ ಶತ್ರುಗಳೇ ಆಗಿವೆ.

ಕಾಮಕ್ರೋಧ ಲೋಭಾದಿಗಳು ನರಕಕ್ಕೆ ಒಯ್ಯುವ ಸಾಧನಗಳು. ಜೀವನನ್ನು ನಾಶಮಾಡಿಬಿಡುತ್ತವೆ. ಆದ್ದರಿಂದ ಈ ಮೂರನ್ನು ಬಿಟ್ಟುಬಿಡಬೇಕು.

ಕಾಮದಿಂದ ಕ್ರೋಧ ಉಂಟಾಗುತ್ತದೆ. ಕ್ರೋಧದಿಂದ ಕಾರ್ಯಾಕಾರ್ಯಗಳ ವಿವೇಚನೆ ಹೋಗಿಬಿಡುತ್ತದೆ. ನಂತರ ಬುದ್ಧಿಯು ಕೆಟ್ಟುಹೋಗಿ ಈ ಬುದ್ಧಿನಾಶದಿಂದ ನರಕಾದಿ ಅನರ್ಥಗಳು ಪ್ರಾಪ್ತವಾಗುತ್ತವೆ. ಅಂತೆಯೇ ದಾಸರು ಕಾಮಕ್ರೋಧಗಳೆಲ್ಲ ನೀಡಾಡು ಎಂದು ಹೇಳಿರುವುದು ಬಹು ಸಮಂಜಸವಾಗಿದೆ.

ಮನಸ್ಸನ್ನು ನಿಗ್ರಹಿಸಿ ಆ ಮನಸ್ಸು ಲಕ್ಷ್ಮೀಪತಿಯಾದ ಶ್ರೀಹರಿಯನ್ನು ಕೊಂಡಾಡುವುದರಲ್ಲಿ ತೊಡಗಿಸಬೇಕು. "ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ" ಎಂಬಂತೆ ಮನಸ್ಸು ಸಂಸಾರದ ಬಂಧನ ತಂದುಕೊಡುವುದಕ್ಕೂ ಅದರ ವಿಮೋಚನೆಗೂ ಕಾರಣವಾ

ಗಿದೆ. ಇಂಥ ಮನಸ್ಸು ವಿಷಯ ಪದಾರ್ಥಗಳಲ್ಲಿ ಹೋಗದೇ ಭಗವಂತನ ನಾಮ ಸಂಕೀರ್ತನೆಯಲ್ಲಿ ತೊಡಗಿರಬೇಕು. ಭಗವಂತನ ನಾಮಸಂಕೀರ್ತನೆ, ಸ್ಮರಣೆ ಮಾನವನ ಎಲ್ಲ ಪಾಪಗಳನ್ನು ಕಳೆದುಬಿಡುತ್ತದೆ. ಶ್ರೀಮದಾನಂದ ತೀರ್ಥ ಭಗವತ್ಪಾದರು ದ್ವಾದಶ ಸ್ತೋತ್ರದಲ್ಲಿ "ಯತತೋಽಪಿ ಹರೇಃ ಪದ ಸಂಸ್ಮರಣೇ ಸಕಲಂ ಲಯಂ ವ್ರಜತಿ" ಎಂದಾಗ ತಿಳಿಸಿರುವುದನ್ನು ಇಲ್ಲಿ ಸ್ಮರಿಸುವುದು ಅವಶ್ಯ. ಈ ಕಾರಣದಿಂದ ದಾಸರು "ಮಾಧವನ ಕೊಂಡಾಡು" ಎಂದು ಹೇಳಿರುವುದು ಗಮನಾರ್ಹವಾಗಿದೆ.

ಅನುದಿನವು ಹರಿಕಥೆಯ
ಕೇಳಿ ಸಂತೋಷ ಪಡು
ವಿನಯದಲಿ ಸಜ್ಜನರ ಕೂಡು
ಮನಮುಟ್ಟಿ ದುರಾಚಾರ ಮಾಳ್ಪರನು ನೀ ಕಾಡು
ಹಣ ಹೊನ್ನು ಪರಹೆಣ್ಣು ನಂಜೆಂದು ನೋಡು

ಪ್ರತಿದಿನವೂ ಹರಿಯ ಕಥಾಮೃತವನ್ನು ಕೇಳಿ ಸಂತೋಷ ಪಡಬೇಕು. ಸಜ್ಜನರ ಸಮಾಗಮವನ್ನು ಬಯಸಬೇಕು. ಅವರೊಡನೆ ವಿನಯದಿಂದ ವರ್ತಿಸಬೇಕು. ದುರಾಚಾರಿಗಳಿಂದ ದೂರವಿರಲು ಪ್ರಯತ್ನಿಸಬೇಕು. ಅವರ ದುರಾಚಾರವನ್ನು ನಿಂದಿಸಬೇಕು, ಅವಹೇಳನ ಮಾಡುತ್ತಿರಬೇಕು. ದುಡ್ಡು, ಬಂಗಾರ, ಹೆಣ್ಣು - ಇವುಗಳನ್ನು ಮಣ್ಣಿಗೆ ಸಮಾನವೆಂದು ನೋಡುತ್ತಿರಬೇಕೆಂದು ದಾಸರು ಇಲ್ಲಿ ತಿಳಿಸಿದ್ದಾರೆ.

ನಿತ್ಯದಲ್ಲಿ ಶ್ರೀಹರಿಯ ಕಥಾಶ್ರವಣ ಮಾಡುವವರಿಗೆ ಆಗುವ ಲಾಭವನ್ನು ಭಾಗವತದಲ್ಲಿ ತಿಳಿಸಿದ್ದಾರೆ.

ಪಿಬಂತಿ ಯೇ ಭಗವಂತ ಆತ್ಮನಃ ಸತಾಂ
ಕಥಾಮೃತಂ ಶ್ರವಣ ಪುಟೇಷು ಸಂಭೃತಂ
ಪುನಂತಿ ತೇ ವಿಷಯ ವಿದೂಷಿತಾಶಯಂ
ವ್ರಜಂತಿ ತಚ್ಚರಣ ಸರೋರುಹಾಂತಿಕಾಂ
(2-2-37)

ಯಾರು ಶ್ರೀಹರಿಯ ಕಥಾಮೃತವನ್ನು ಜ್ಞಾನ ಭಕ್ತಿ ವಿರಕ್ತ್ಯಾದಿಗಳಿಂದ ಸಜ್ಜನ ಮುಖದಿಂದ ತಮ್ಮ ಕಿವಿಗಳೆಂಬ ಬಟ್ಟಲಿನಲ್ಲಿ ತುಂಬಿಕೊಂಡು ಕುಡಿಯವರೋ ಅವರು ತಮ್ಮ ಅಂತಃಕರಣವನ್ನು ಶುದ್ಧಗೊಳಿಸಿಕೊಂಡು ಭಗವಂತನ ಪಾದಕಮಲವನ್ನು ಹೊಂದುತ್ತಾರೆ. ಹಾಗೂ--

ಶೃಣ್ವನ್ ಶೃಣಾನ್ ಸಂಸ್ಥಿರಯಂ ಶ್ಚ ಚಿಂತಯನ್
ನಾಮಾನಿ ರೂಪಾಣಿ ಚ ಮಂಗಲಾನಿತೇ
ಕ್ರಿಯಾಸು ಯಃ ತ್ವತ್ ಚರಣಾರವಿಂದಯೋಃ
ಆವಿಷ್ಟಚಿತ್ತೋ ನ ಭವಾಯ ಕಲ್ಪತೇ
(10-2-37)

ಭಗವಂತನ ಪವಿತ್ರ ಕಥಾಮೃತವನ್ನು ಕೇಳುತ್ತ, ಎಚ್ಚರಿಸುತ್ತ, ಮಂಗಳರೂಪವನ್ನು ಸ್ಮರಿಸುತ್ತ, ನಿತ್ಯ ಕರ್ಮಗಳನ್ನು ಆಚರಿಸುತ್ತ ಪರಮಾತ್ಮನ ಪಾದಾರವಿಂದಗಳಲ್ಲಿ ಮನವಿಟ್ಟವರು ಸಂಸಾರ ಬಂಧನಕ್ಕೆ ಒಳಗಾಗುವುದಿಲ್ಲ.

ಆದ್ದರಿಂದ ದಾಸರು ನಿತ್ಯ ಹರಿಕಥೆಯನ್ನು ಕೇಳಿ ಸಂತೋಷಪಡು ಎಂದು ಹೇಳಿರುವುದು ಸಮಂಜಸವಾಗಿದೆ.

ವಿನಯೋ ಹಿ ಭೂಷಯತಿ ಸರ್ವರಸಂ ಎಂಬಂತೆ ಎಲ್ಲ ರಸಗಳಿಗೂ ವಿನಯವೇ ಭೂಷಣವೆಂದು ತಿಳಿದು ಬರುತ್ತದೆ. ವಿನಯಃ ಸಂತಾಂ ಪ್ರಿಯಃ - ಇತ್ಯಾದಿ ವಿನಯಗುಣವು ಎಲ್ಲರಿಂದಲೂ ಶ್ಲಾಘ್ಯವೆಂದು ತಿಳಿಯುತ್ತದೆ.

ಮಧ್ವಾಚಾರ್ಯರು ವೇದವ್ಯಾಸರ ದರ್ಶನಕ್ಕೆ ಹೋದಾಗ "ವಿನಯಾಭರಣೇನ ಭೂಷಿತಃ ಸ್ಫುಟಮಷ್ಟಾಂಗ ಚೇಷ್ಟಿತಃ" ಎಂಬಂತೆ ವಿನಯವೆಂಬ ಅಲಂಕಾರದಿಂದ ಭೂಷಿತರಾಗಿ ಎಂಟು ಅಂಗಗಳಿಂದ ನಮಸ್ಕಾರ ಮಾಡಿದರೆಂದು ಸುಮಧ್ವ ವಿಜಯದಲ್ಲಿ ವರ್ಣಿಸಿದ್ದುಂಟು. ಇದರಿಂದ ತಮಗಿಂತಲೂ ಹಿರಿಯರಾದವರಲ್ಲಿ ವಿನಯದಿಂದ ಇರಬೇಕೆಂದು ತೋರಿಸಿಕೊಟ್ಟಿದ್ದಾರೆ ಮಧ್ವಾಚಾರ್ಯರು.

ಅಂತೆಯೇ ದಾಸರು ವಿನಯದಲಿ ಸಜ್ಜನರ ಕೂಡು ಎಂದಿದ್ದಾರೆ. ಇದರಿಂದ ಆಗುವ ಲಾಭ ಮಹತ್ತರವಾದದ್ದು. ಭಾಗವತಕಾರರು ಹೇಳುತ್ತಾರೆ.

ಸತಾಂ ಪ್ರಸಂಗಾನ್ಮಮ ವೀರ್ಯಸಂಪದೋ
ಭವಂತಿ ಹೃತ್ಕರ್ಣ ರಸಾಯನಾಃ ಕಥಾ
ತಜ್ಜೋಷಣಾದಾಶ್ವಪ ವರ್ಗ ವರ್ತ್ಮ ನಿ
ಶ್ರದ್ಧಾವತೀ ಭಕ್ತಿಃ ಅನುಕ್ರಮಿಷ್ಯತಿ (3-26-25)

ಸಜ್ಜನರ ಸಹವಾಸದಿಂದ ಕಿವಿ ಮನಸ್ಸುಗಳಿಗೆ ಸುಖಪ್ರದನಾದ ಭಗವಂತನ ಮಹಿಮೆಗಳಿಂದ ಕೂಡಿದ ಚರಿತ್ರೆಗಳ ಶ್ರವಣವಾಗುತ್ತದೆ. ಇಂತಹ ಸಜ್ಜನರ ಸೇವೆಯ ಪ್ರಭಾವದಿಂದ ಭಗವದಪರೋಕ್ಷಕ್ಕೆ ಸಾಕ್ಷಾತ್ ಸಾಧನವಾದ ಭಕ್ತಿಯೂ ಕ್ರಮವಾಗಿ ಅಭಿವೃದ್ಧಿಯಾಗುತ್ತದೆ.

ಸದಾಚಾರದಿಂದ ಸದ್ಗತಿ ಮತ್ತು ದುರಾಚಾರದಿಂದ ದುರ್ಗತಿ ಇವು ನಿಶ್ಚಿತವೆಂದು ಮೊದಲೇ ತಿಳಿಯಬೇಕು.

ದುರಾಚಾರೋಹಿ ಪುರುಷಃ ಲೋಕೇ ಭವತಿ ನಿಂದಿತಃ - ಎಂಬಂತೆ ದುರಾಚಾರವುಳ್ಳ ಜನರು ಲೋಕದಲ್ಲಿ ನಿಂದೆಗೆ ಒಳಗಾಗುತ್ತಾರೆ. ಅವರ ಅವಹೇಳನ ಮಾಡಬೇಕೇ ಹೊರತು ನೀವು ಮಾಡುತ್ತಿರುವುದು ಸರಿ ಎನ್ನಬಾರದು.

ಹಣ, ಹೊನ್ನು, ಹೆಣ್ಣುಗಳನ್ನು ಮಣ್ಣಿಗೆ ಸಮವೆಂದು ತಿಳಿಯಬೇಕು. ಸುಭಾಷಿತವೊಂದು ಹೀಗೆ ಹೇಳುತ್ತದೆ.

ಮಾತೃವತ್ ಪರದಾರೇಷು
ಪರದ್ರವ್ಯೇಷು ಲೋಷ್ಠಂ
ಆತ್ಮವತ್ ಸರ್ವಭೂತೇಷು
ಯಃ ಪಶ್ಯತಿ ಸ ಪಂಡಿತಃ

ಪಂಡಿತನೆನಿಸಿಕೊಳ್ಳುವವನು ಪರಸ್ತ್ರೀಯನ್ನು ತಾಯಿಯಂತೆಯೂ, ಪರದ್ರವ್ಯವನ್ನು ಮಣ್ಣಿನಂತೆಯೂ ನೋಡುವನು.

ವೇದ ಶಾಸ್ತ್ರಾರ್ಥ ತತ್ವದ ವಿಚಾರವ ಮಾಡು
ಮಾಧವನ ಭಕ್ತಿ ಬೇಡು
ಪಾದದಿಂದಲಿ ತೀರ್ಥ ಯಾತ್ರೆಗಳ ನೀಮಾಡು
ಖೇದಪಡದನುದಿನದಿ ಸಂತೋಷ ಕೂಡು.

ವೇದಶಾಸ್ತ್ರಗಳಲ್ಲಿ ಹೇಳಿದ ತತ್ವಗಳನ್ನು ವಿಚಾರಿಸಿ ತಿಳಿಯಬೇಕು. ಸರ್ವೋತ್ತಮನಾದ ಲಕ್ಷ್ಮೀಪತಿಯಾದ ಮುಕ್ತಿದಾತನಾದ ಶ್ರೀ ಹರಿಯಲ್ಲಿ ಭಕ್ತಿಯನ್ನು ಬೇಡುತ್ತಿರಬೇಕು. ಪಾದಗಳಿಂದ ತೀರ್ಥಯಾತ್ರೆಗಳನ್ನು ಮಾಡಬೇಕು. ದೇವರು ದಯಪಾಲಿಸಿಕೊಟ್ಟದ್ದನ್ನು ಸುಖಸಂತೋಷದಿಂದ ಹೊಂದಿ ತೃಪ್ತನಾಗಿ, ವಿಷಾದ ಪಡದೆ ಜೀವನವನ್ನು ಸಾಗಿಸುತ್ತಿರಬೇಕು ಎಂದು ದಾಸರು ತಿಳಿಸಿದ್ದಾರೆ.

ವೇದಶಾಸ್ತ್ರಗಳು ಭಗವತ್ತತ್ತ್ವವನ್ನು ತಿಳಿಸಿಕೊಡುವ ತತ್ವದ ಖನಿಗಳೇ ಆಗಿವೆ. ಭಗವಂತನು ಸದಾಗಮೈಕ ವಿಜ್ಞೇಯಂ ಎಂಬಂತೆ ವೇದೈಕ ಸಮಧಿಗಮ್ಯನು. ಕಾರಣ ವೇದಶಾಸ್ತ್ರಗಳನ್ನು ಅಭ್ಯಾಸ ಮಾಡುತ್ತಿರಬೇಕು.

ವೇದ ಪ್ರಣಿಹಿತೋ ಧರ್ಮಃ ಹ್ಯಧರ್ಮಸ್ತದ್ವಿಪರ್ಯಃ ಎಂಬಂತೆ ಭಾಗವತೋಕ್ತಿಯಂತೆ ವೇದಗಳು ತಿಳಿಸುತ್ತಿರುವುದೇ ಧರ್ಮ, ಉಳಿದುದೆಲ್ಲವೂ ಅಧರ್ಮವೆಂದು ತಿಳಿಯಬೇಕು. ವೇದಾನುಕೂಲಗಳಾದ ಗ್ರಂಥಗಳು ಯಾವುವು ಇವೆಯೋ ಅವೆಲ್ಲವೂ ಶಾಸ್ತ್ರಗಳೆಂದೇ ಪರಿಗಣಿಸಲ್ಪಟ್ಟಿವೆ. ಆದ್ದರಿಂದ ಇವುಗಳ ಅಭ್ಯಾಸ ಮಾಡಬೇಕಾದುದು ಅವಶ್ಯವೇ ಆಗಿದೆ.

ಸತ್ಯಂ ಸತ್ಯಂ ಪುನಃ ಸತ್ಯಂ
ಉದ್ಧೃತ್ಯ ಭುಜಮುಚ್ಯತೇ
ವೇದಶಾಸ್ತ್ರಾತ್ ಪರಂ ನಾಸ್ತಿ
ನ ದೈವಂ ಕೇಶವಾತ್ ಪರಂ

ಎಂಬಂತೆ ವೇದಗಳು - ಬ್ರಹ್ಮಮೀಮಾಂಸಾಶಾಸ್ತ್ರಕ್ಕಿಂತ ಉತ್ತಮವಾದ ಶಾಸ್ತ್ರವಿಲ್ಲ. ಶ್ರೀಹರಿಗಿಂತ ಉತ್ತಮ ದೇವತೆಯಿಲ್ಲ. ಇಂತಹ ಉತ್ತಮ ದೇವನಾದ ಶ್ರೀಹರಿಯಲ್ಲಿ ಭಕ್ತಿ ಮಾಡಬೇಕು. ಆ ಭಕ್ತಿ ಎಂತಹುದಾಗಿರಬೇಕು?

ಮಾಹಾತ್ಮ್ಯಜ್ಞಾನ ಪೂರ್ವಸ್ತು
ಸುದೃಢಃ ಸರ್ವತೋಧಿಕಃ
ಸ್ನೇಹೋ ಭಕ್ತಿರಿತಿ ಪ್ರೋಕ್ತಃ
ತಯಾ ಮುಕ್ತಿರ್ನಚಾನ್ಯಥಾ

ಮಾಹಾತ್ಮ್ಯಜ್ಞಾನ ಪೂರ್ವಕ ಸುದೃಢವಾದ, ಸರ್ವೋತ್ತಮನಾದ ಭಗವಂತನಲ್ಲಿ ಮಾಡುವ ಸ್ನೇಹಕ್ಕೆ ಭಕ್ತಿಯೆಂದು ಹೆಸರು. ಭಕ್ತಿಯಿಲ್ಲದೆ ಮುಕ್ತಿಯು ಸಿಗಲಾರದು. ಆದಕಾರಣ ಮುಕ್ತಿಯನ್ನು ಹೊಂದಬೇಕೆಂಬ ಅಪೇಕ್ಷೆಯುಳ್ಳ ಸಜ್ಜನರೆಲ್ಲರೂ, ಮುಕ್ತಿ ಪ್ರದನಾದ ಆ ದೇವರಲ್ಲಿ ಭಕ್ತಿಯನ್ನು ಬೇಡಬೇಕೆಂಬುದು ಸಾರ್ಥಕವೆನಿಸಿದೆ.

ತೀರ್ಥಯಾತ್ರೆಗಳನ್ನು ಕೈಗೊಂಡಾಗ ಅಲ್ಲಿ ಸಾಧು ಸಜ್ಜನರ ಸಮಾಗಮವು ದೊರೆಯುತ್ತದೆ. ಅವರ ದರ್ಶನದಿಂದ ಅನೇಕ ಪಾಪಗಳು ನಾಶವಾಗುತ್ತವೆ. ಮನಸ್ಸು ಪರಿಶುದ್ಧವಾಗುತ್ತದೆ. ಆಗ ಭವದಾರಾಧನೆ ಮನಃ ಪೂರ್ವವಾಗಿ ನಡೆಯಲು ಅನುಕೂಲವಾಗಿ, ಭಗವಂತ ಸದ್ಗತಿಯನ್ನು ನೀಡುತ್ತಾನೆ.

ಪದ್ಯದಲ್ಲಿ ದಾಸರು ಪಾದದಿಂದಲಿ ತೀರ್ಥಯಾತ್ರೆಮಾಡು ಎಂದಿದ್ದಾರೆ. ಇದರ ಹಿನ್ನೆಲೆ ಹೀಗಿದೆ-

ಯಾರು ಭಗವಂತನ ಪವಿತ್ರ ಕ್ಷೇತ್ರಗಳ ಪ್ರದಕ್ಷಿಣೆ ಹಾಗೂ ಯಾತ್ರೆಗಳನ್ನು ಮಾಡುವುದಿಲ್ಲವೊ ಅವರ ಪಾದಗಳು ಕಟ್ಟಿಗೆಯಂತೆ ನಿರ್ಜೀವ ವಸ್ತುಗಳು ಎಂದು ತಿಳಿಯಬೇಕು.

ಭಗವಂತ ನಮಗೆ ಕಡಿಮೆ ಕೊಟ್ಟಿದ್ದಾನೆ - ಇನ್ನೊಬ್ಬರಿಗೆ ಹೆಚ್ಚಿಗೆ ಕೊಟ್ಟಿದ್ದಾನೆ ಎಂದು ವಿಚಾರ ಮಾಡುತ್ತ ಅಸಂತೋಷ ಹೊಂದಕೂಡದು. ನಮ್ಮ ಯೋಗ್ಯತೆಯ ಪ್ರಕಾರ ನಮಗೆ, ಅವರ ಯೋಗ್ಯತೆಯ ಪ್ರಕಾರ ಅವರಿಗೆ ಕೊಟ್ಟಿದ್ದಾನೆ ಎಂದು ತಿಳಿಯಬೇಕು ಭಗವಂತನಲ್ಲಿ ವೈಷಮ್ಯಾದಿ ದೋಷಗಳಿಗೆ ಅವಕಾಶವೇ ಇಲ್ಲ. ಅವನು ಜೀವರ ಅನಾದಿ ಕರ್ಮ, ಅರ್ಹತೆ, ಪ್ರಯತ್ನ - ಇವುಗಳ ಅನುಸಾರವಾಗಿ ಎಲ್ಲವನ್ನೂ ಕೊಡುತ್ತಾನೆಂದು ಅನುಸಂಧಾನವಿಟ್ಟುಕೊಂಡು ಸಂತೋಷದಿಂದ ಜೀವನ ನಡೆಸಬೇಕು.

ನಂಬದಿರು ಈ ದೇಹ ಅಂಬುಗುಳ್ಳೆಯಂತೆ
ನಂಬಿ ನೀ ಕೆಡಲುಬೇಡ
ಕೊಂಬುವರು ಬಂದರೆ ಕೊಡರೊಂದು
ರೂಪಿಯನು
ಅಂಬುಜಾಕ್ಷ ಪುರಂದರ ವಿಠಲನ್ನ ನೆನೆ ಮನವೆ

ಮಾನವನ ದೇಹವು ನೀರ ಮೇಲಣ ಗುಳ್ಳೆಯಂತೆ ಕ್ಷಣಿಕವಾದುದು. ಯಾವಾಗ ನಾಶ ಹೊಂದುವುದೋ ತಿಳಿಯದು. ಕಾರಣ ಈ ದೇಹವನ್ನು ನಂಬಿ ಕೂಡಲಾಗದು ಬಾಲ್ಯದಿಂದಲೇ ಧರ್ಮವನ್ನು ಆಚರಿಸಬೇಕು. ಭಗವಂತನನ್ನು ಭಜಿಸಬೇಕು. ಜ್ಞಾನಭಕ್ತಿ ವೈರಾಗ್ಯಾದಿಗಳನ್ನು ಹೊಂದಬೇಕು. ಸಂಪತ್ತನ್ನು ದೇವರು ಕೊಟ್ಟಾಗ ದಾನ ಧರ್ಮಾದಿಗಳನ್ನು ಮಾಡಬೇಕು. ಜೀವನದ ಬೆನ್ನು ಹತ್ತಿ ಬರುವುದು ಧರ್ಮ ಮಾತ್ರ, ಕಾರಣ ಧರ್ಮವನ್ನು ಆಚರಿಸುತ್ತ ಪುರಂದರ ವಿಠಲನನ್ನು ನೆನೆದು ಜೀವನವನ್ನು ಸಾರ್ಥಕ ಪಡಿಸಿಕೊಳ್ಳಬೇಕು ಎನ್ನುತ್ತಾರೆ. ದುರ್ಲಭೋ ಮಾನುಷೋ ದೇಹಃ ದೇಹಿನಾಂ ಕ್ಷಣ ಭಂಗುರಃ - ಎಂಬ ಭಾಗವತೋಕ್ತಿಯಂತೆ ಮನುಷ್ಯ ದೇಹವು ದುರ್ಲಭವಾದದ್ದು ಹಾಗೂ ಕ್ಷಣಿಕವಾದದ್ದು ಇಂತಹ ದೇಹವನ್ನು ನಂಬಿ ಕೆಡದೆ ದಾನ ಧರ್ಮಗಳನ್ನು ಆಚರಿಸಬೇಕು. ಭಾಗವತ ಮಹಾತ್ಮೆಯಲ್ಲಿ ಹೀಗೆ ತಿಳಿಸಿದ್ದಾರೆ.

ಬುದ್ ಬುದಾ ಇವ ತೋಯೇಷು
ಮರಣ ಇವ ಜೀವೇಷು
ಜಾಯಂತೇ ಮರಣಾಯೈವ
ಕಥಾಶ್ರವಣ ವರ್ಜಿತಾಃ

ನೀರಮೇಲಣ ಗುಳ್ಳೆಗಳು ಹೀಗೆ ಕ್ಷಣಿಕವಾಗಿರುತ್ತವೆಯೋ ಹಾಗೆ ಜೀವರ ದೇಹಗಳು ಕ್ಷಣಿಕವಾಗಿರುತ್ತವೆ. ಭಗವಂತನ ಕಥಾ ಶ್ರವಣ ಮಾಡದಿದ್ದರೆ ಅವರ ಜೀವನ ವ್ಯರ್ಥವೇ ಸರಿ. ಇಂತಹ ದೇಹವವನ್ನು ನೆಚ್ಚಕೂಡದು.

ಇದನ್ನು ಸುಭಾಷಿತವೊಂದು ಮಾರ್ಮಿಕವಾಗಿ ವಿವರಿಸುತ್ತದೆ.

ಅನಿತ್ಯಾನಿ ಶರೀರಾಣಿ
ವಿಭವೋ ನೈವ ಶಾಶ್ವತಃ
ನಿತ್ಯಂ ಸನ್ನಿಹಿತೋ ಮೃತ್ಯುಃ
ಕರ್ತವ್ಯೋ ಧರ್ಮ ಸಂಗ್ರಹಃ

ಮಾನವರ ದೇಹಗಳು ಅನಿತ್ಯ, ಸಂಪತ್ತು ಅಶಾಶ್ವತ. ನಿತ್ಯವೂ ಮೃತ್ಯುವು ಸನ್ನಿಹಿತವಾಗಿದೆಯೆಂದು ತಿಳಿದು ಧರ್ಮ ಮಾಡುತ್ತಿರಬೇಕು.

ದೇವರು ಸಂಪತ್ತನ್ನು ಕೊಟ್ಟಾಗ, ಯೋಗ್ಯರು, ಸತ್ಪಾತ್ರರು ದೊರೆತಲ್ಲಿ ದಾನ ಧರ್ಮಗಳನ್ನು ಮಾಡಿ ಪುಣ್ಯ ಸಂಪಾದಿಸಬೇಕು. ಯಾವಾಗಲೂ ಪುರಂದರ ವಿಠಲನನ್ನು ತಪ್ಪದೇ ನೆನೆಯುತ್ತಿರಬೇಕು - ಸ್ಮರಿಸುತ್ತಿರಬೇಕು.

ಆನಂದತೀರ್ಥ ಭಗವತ್ಪಾದರು ಕೃಷ್ಣಾಮೃತ ಮಹಿಮಾರ್ಣವ ಗ್ರಂಥದಲ್ಲಿ ಹೀಗೆ ತಿಳಿಸಿದ್ದಾರೆ.

ಯೇ ಸ್ಮರಂತಿ ಸದಾವಿಷ್ಣುಂ
ವಿಶುದ್ಧೇ ನಾಂತರಾತ್ಮನಾ
ತೇ ಪ್ರಯಾಂತಿ ಭಯಂ ತ್ಯಕ್ತ್ವಾ
ವಿಷ್ಣುರ್ಲೋಕ ಮನಾಮಯಂ

ನಿರ್ಮಲವಾದ ಮನಸ್ಸಿನಿಂದ ಶ್ರೀಹರಿಯನ್ನು ಸ್ಮರಿಸುವ ಜನರು ಈ ಸಂಸಾರಭಯವನ್ನು ಕಳೆದುಕೊಂಡು ವಿಷ್ಣುಲೋಕವನ್ನು ಹೊಂದುತ್ತಾರೆ.

ದಾಸರು ಪುರಂದರ ವಿಠಲನನ್ನು ನೆನೆ ಮನವೆ - ಎಂಬುದರ ಔಚಿತ್ಯವು ಹೀಗಿದೆ-

ಕಿಂ ತೇನ ಮನಸಾ ಕಾರ್ಯಂ
ಯನ್ನ ತಿಷ್ಠತಿ ಕೇಶವೇ
ಮನೋ ಮುಕ್ತಿ ಫಲಾವಾಪ್ತ್ಯೊ
ಕಾರಣಂ ನ ಪ್ರಯೋಜನಂ

ಭಗವಂತನನ್ನು ನೆನೆಯದ ಮನಸ್ಸು ಇದ್ದೇನು ಫಲ? ಅದು ಯಾವಾಗಲೂ ಶ್ರೀಹರಿಯನ್ನು ನೆನೆಯುತ್ತಿರಬೇಕು. ಅದೇ ಮೋಕ್ಷಕ್ಕೆ ಕಾರಣ. ಮನಸ್ಸು ಇದ್ದದ್ದಕ್ಕೆ ಸಾರ್ಥಕವೆಂದು ತಿಳಿಯಬೇಕು.

ಹೀಗೆ ಪುರಂದರದಾಸರು ಮಾನವ ಜೀವನದ ಪ್ರಮುಖ ಕರ್ತವ್ಯಗಳನ್ನು ತಿಳಿಸಿ, ಎಚ್ಚರಿಸಿ, ಭಗವಂತನನ್ನು ಹೊಂದುವ ಉಪಾಯಗಳನ್ನು ವಿವರಿಸಿ, ತುಂಬ ಉಪಕಾರ ಮಾಡಿದ್ದಾರೆ.

|| ಶ್ರೀ ಕೃಷ್ಣಾರ್ಪಣಮಸ್ತು ||



# ಭಕ್ತಿ

ವಿಮಲಾ ರಾಮಚಂದ್ರ ಕುಲಕರ್ಣಿ.

ಭಕ್ತಿಯೆಂದರೆ ದೇವರಲ್ಲಿ ಪ್ರೀತಿ ಅಥವಾ ಪ್ರೇಮವೆಂದು ಹೇಳಬಹುದು. ಇದೊಂದು ಭಾವವಾಚಕ ಶಬ್ದ. ಪ್ರೇಮವು ತಂದೆ - ತಾಯಿ, ಹೆಂಡತಿ - ಮಕ್ಕಳು ಮತ್ತು ಮನೆ - ದ್ರವ್ಯಗಳ ವಿಷಯಗಳಲ್ಲಿದ್ದರೆ ಅದು ಮೋಹವೆನಿಸುವುದು. ಸೃಷ್ಟಿಕರ್ತನಾದ ಪರಮಾತ್ಮನನ್ನು ಕುರಿತು ಉಂಟಾದ ಪ್ರೇಮವು ಭಕ್ತಿ ಎನಿಸುವುದು. ಏಕೆಂದರೆ, ಐಹಿಕ ವಸ್ತುಗಳೆಲ್ಲ ಸೃಷ್ಟಿ - ಸ್ಥಿತಿ - ಲಯಕ್ಕನುಸಾರವಾಗಿ ನಾಶಹೊಂದುವುವು. ಆದರೆ ಭಗವಂತನ ಮೇಲಿಟ್ಟಿರುವ ಪ್ರೇಮರೂಪಿ ಭಕ್ತಿಯು ಶಾಶ್ವತವಾಗಿದ್ದು, ಮಾನವರ ಮೋಕ್ಷಕ್ಕೆ ಕಾರಣವೆನಿಸುತ್ತದೆ.

ಭಕ್ತಿಯಲ್ಲಿ ಅನೇಕ ಪ್ರಕಾರಗಳಿವೆ. ಕರ್ಮಯೋಗ, ಜ್ಞಾನಯೋಗಗಳ ಹಾಗೆ ಭಕ್ತಿಯೋಗವೂ ಶ್ರೇಷ್ಠವಾದದ್ದೇ, ಸಾಂಖ್ಯಾಚಾರ್ಯನಾದ ಕಪಿಲಾವತಾರಿ ಪರಮಾತ್ಮನು ತನ್ನ ತಾಯಿ ದೇವಹೂತಿಗೆ ಭಕ್ತಿಯೋಗವನ್ನೇ ಮೊದಲು ಉಪದೇಶಿಸಿರುತ್ತಾನೆ.

ನಿರ್ಗುಣ ಭಕ್ತಿಯು ಸತ್ವಾದಿ ಗುಣಗಳನ್ನು ಹೋಗಲಾಡಿಸಿ ಮುಕ್ತಿಗೆ ಒಯ್ಯುವುದರಿಂದ, ಅದನ್ನು

"ನಿರ್ಗುಣ"

ವೆಂದೇ

ಕರೆಯಲಾಗಿದೆ.

ಇಂತಹ ನಿರ್ಗುಣ ಭಕ್ತನು ಭಗವಂತನ ಕೈಂಕರ್ಯಕ್ಕೋಸ್ಕರ ಮುಕ್ತಿಯನ್ನು ಸಹ ತಿರಸ್ಕರಿಸುತ್ತಾನೆ. ಭಕ್ತಿಯೋಗವೇ ಪರಮ ಸಾಧನವೆಂದು, ತ್ರಿಗುಣಗಳನ್ನು ದಾಟಿ, "ಪರಮಾತ್ಮನ ಭಾವವನ್ನು ಪಡೆಯುತ್ತಾನೆ" ಎಂದು ಭಾಗವತದಲ್ಲಿ ಹೇಳಿದ್ದಾರೆ ಪರಮಾತ್ಮ

ಸ ಏವ ಭಕ್ತಿಯೋಗಾಖ್ಯ ಅತ್ಯಧಿಕ ಉದಾಹೃತಃ
ಯೇ ನಾತಿವ್ರಜ್ಯ ತ್ರಿಗುಣಂ
ಮದ್ಭಾವ ಮಯೋಪಪದ್ಯತೇ
(ಭಾಗವತ)

ಆದರೆ ಈಗ ನಾವು ತಿಳಿಯಬೇಕಾಗಿರುವ ವಿಷಯವು ಸಾಮಾನ್ಯಜನರು ತಮ್ಮ ದೈನಂದಿನ ಕಾರ್ಯಗಳನ್ನು ನಿರ್ವಹಿಸುತ್ತಾ, ಪರಮಾತ್ಮನಲ್ಲಿ ಹೇಗೆ ಭಕ್ತಿಯನ್ನು ಮಾಡಬೇಕು ಎಂಬುದು.

ಭಕ್ತಿಯಲ್ಲಿ ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ ಮತ್ತು ಆತ್ಮನಿವೇದನ - ಎಂಬ ಒಂಬತ್ತು ಪ್ರಕಾರಗಳಿವೆ. ಇವುಗಳಲ್ಲಿ ಒಂದೊಂದು ಒಂಬತ್ತು ಬಗೆಯಾಗಿರುವುದರಿಂದ, ಭಕ್ತಿಯಲ್ಲಿ ಒಟ್ಟು ಎಂಬತ್ತೊಂದು ಪ್ರಕಾರಗಳೆಂದು ಹೇಳಬಹುದು. ವೇದ, ಶ್ರುತಿ, ಮತ್ತು ಪುರಾಣಗಳನ್ನು ಸಂಸಾರಿಗಳು ಓದಿ ತಿಳಿಯಲಾರರು. ಅವು ಅವರಿಗೆ ಗಗನಕುಸುಮಗಳು ಅಂದರೆ ಅವರಿಗೆ ನಿಲುಕಲಾರದವು. ಅಂಥವರು ತಮ್ಮ ನಿತ್ಯಜೀವನದಲ್ಲಿ ದೇವರನ್ನು ಅರಿಯಲು, ಅರ್ಚಿಸಲು, ಸ್ತುತಿಸಲು ಅನುಕೂಲವಾಗುವಂತೆ ದೇವರ್ಷಿ ನಾರದರು ವೇದ - ಶ್ರುತಿ, ಉಪನಿಷತ್ತುಗಳ ಸಾರವನ್ನು ಸ್ವಲ್ಪದರಲ್ಲಿಯೇ, ಸಿಹಿಸಾರವಾದ ಹಾಗೆ ಸಂಗ್ರಹಿಸಿ ಸೂತ್ರಗಳಲ್ಲಿ ರೂಪಿಸಿದ್ದಾರೆ. ಈ ಭಕ್ತಿಯ ಮಹಿಮೆಯನ್ನು ನಾರದರು ವ್ಯಾಸ ಮಹರ್ಷಿಗಳಿಗೆ ಸರಸ್ವತಿ ನದೀತೀರದಲ್ಲಿ ವ್ಯಾಖ್ಯಾನಿಸುತ್ತಾರೆ. ಪರಮಾತ್ಮನಲ್ಲಿರಿಸುವ ನಿರಂತರ ಚಿಂತನೆಯೇ ಭಕ್ತಿ. ಭಕ್ತಿ ಮಹಿಮೆಯನ್ನರಿತ ನಾರದರೇ ಇದರ ದ್ರಷ್ಟಾರರು. ತ್ರಿಮೂರ್ತಿಗಳ ನಿವಾಸಸ್ಥಾನಗಳನ್ನು ಸ್ವೇಚ್ಛೆಯಿಂದಲೇ ಪ್ರವೇಶಿಸಲು ಅರ್ಹರಾದಂಥವರು. ನಾರದರು, ಭಕ್ತಿ-ಶಾಸ್ತ್ರದ ಅಡಿಗಲ್ಲನ್ನು ತಮ್ಮ ಅನುಭವಗಳ ಮೂಲಕ ಸ್ಥಾಪಿಸಿ, ಮಾನವರ ಹಿತಕ್ಕಾಗಿ, ಅದರ ಮೇಲೆ ಸರಳ ಸುಂದರ ಸೂತ್ರಗಳಿಂದ ಭವ್ಯವಾದ ಸೌಧವನ್ನು ನಿರ್ಮಿಸಿದ್ದಾರೆ. ಇದು ಕೇವಲ ಮಾನವರ ಕಲ್ಯಾಣಕ್ಕಾಗಿಯೇ ಇರುವ ನಾರದರ ಸುಂದರ ಕೃತಿ "ನಾರದ ಭಕ್ತಿಸೂತ್ರ".

ಮಾನವರಲ್ಲಿಯ ಅಜ್ಞಾನ ಅಹಂಕಾರಗಳನ್ನು ಕಳೆಯಲು ದೇವರಲ್ಲಿ ಭಕ್ತಿಯೇ ಕಾರಣವನಿಸುವುದು. ಎಲ್ಲ ಕಾಮವಿದೆಯೋ, ಅಲ್ಲಿ ರಾಮನಿಲ್ಲ, ಆದುದರಿಂದ ಭಗವಂತನ ನಿಜವಾದ ಭಕ್ತನು ಮೊದಲು ಬಿಡಬೇಕಾದದ್ದು ಅಹಂಕಾರ ಮತ್ತು ಅಜ್ಞಾನ. ಆತ್ಮ ಮತ್ತು ದೇಹಗಳ ಬಗ್ಗೆ ಇರುವ ತಪ್ಪು ಕಲ್ಪನೆಗಳೇ ಈ ಅಜ್ಞಾನಕ್ಕೆ ಕಾರಣವೆನಿಸುವುವು ನಿಜವಾದ ಭಕ್ತನು ತನ್ನದೆಲ್ಲವನ್ನು ತ್ಯಜಿಸಿದ ನಂತರವೇ ಅಂದರೆ, ತನ್ನ ಪೂರ್ಣ ಹೊಣೆಯನ್ನು ಪರಮಾತ್ಮನ ಮೇಲೆ ಹಾಕಿ, ತನ್ನ ಪಾಲಿನ ಕರ್ತವ್ಯವನ್ನು ಮಾಡುವುದರಿಂದಲೇ, ಹೃದಯದಲ್ಲಿರುವ ಆತ್ಮನ ಅರಿವಾಗಿ, ಆನಂದವನ್ನು ಅನುಭವಿಸುವನು. ಆನಂದವೇ ಪರಮಾತ್ಮಸ್ವರೂಪವೆಂದು ಶ್ರುತಿಗಳು ಸಾರುತ್ತವೆ. ಆನಂದ ಅಪರಂಪಾರ, (ಸತ್ - ಚಿತ್ - ಆನಂದ). "ಆನಂದ ಪರಬ್ರಹ್ಮೇತಿ ಯೋನಿಃ" (ಸಹಸ್ರನಾಮ) ಪರಮಾತ್ಮನ ಭಕ್ತಿಮಾಡುವದಕ್ಕೆ ಈ ವಿಷಯವು ಮುಂದುವರೆದಿದೆ.

ಪರಮಾತ್ಮನಲ್ಲಿ ಭಕ್ತಿ ಮಾಡುವುದಕ್ಕೆ ವರ್ಣ, ಲಿಂಗಗಳ ಬೇಧವಿಲ್ಲ; ಬಡವ - ಬಲ್ಲಿದರೆಂಬ ವ್ಯತ್ಯಾಸವಿಲ್ಲ. ಪರಮಾತ್ಮನಿಗೆ ಭಕ್ತರೆಲ್ಲ ಸರಿಸಮಾನರೆ, ದೀನದಲಿತರು, ಅಜ್ಞಾನಿಗಳು ಸಹ, ಸಾಧುಸಂತರ ಸಹವಾಸದಿಂದ, ಧರ್ಮಾತ್ಮರಾಗಬಹುದು. ಇದಕ್ಕೆ ಉದಾಹರಣೆಯೆಂದರೆ ರಾಮಾಯಣದ ಕರ್ತೃವಾಲ್ಮೀಕಿಗಳೇ ಎನ್ನಬಹುದು. ಬೇಟೆಯಾಡಿ ಹಿಂಸ್ರ ಪಶುಗಳನ್ನು ಕೊಂದು ಉಪಜೀವನ ಮಾಡುತ್ತಾ, ದಾರಿಯಲ್ಲಿ ಹೋಗುವ ಪ್ರಯಾಣಿಕರನ್ನು ದೋಚುತ್ತಿದ್ದ ಮಹಾ ಕ್ರೂರಿಯಾದ ಬೇಡ ರತ್ನಾಕರನೇ, ಮಹಾಕಾವ್ಯದ ದ್ರಷ್ಟಾರನಾದದ್ದು ಸಪ್ತ ಋಷಿಗಳ ಸಹವಾಸದಿಂದ. ರಾಮನಾಮವನ್ನು ತದೇಕ ಚಿತ್ತದಿಂದ ಧ್ಯಾನಿಸಿದುದರ ಫಲದಿಂದಲೇ ಎನ್ನುವುದು ಎಲ್ಲರಿಗೂ ಗೊತ್ತಿರುವ ವಿಷಯವೇ. ರಾಜಕುಮಾರ ಧ್ರುವ, ನಾರದರ ಉಪದೇಶದಂತೆ, ನಾರಾಯಣನಲ್ಲಿರಿಸಿದ ಅಚಲಶ್ರದ್ಧೆ - ಭಕ್ತಿಯಿಂದಲೇ ಧ್ರುವಪದವಿಯನ್ನು ಪಡೆದನು. ದೈತ್ಯರಾಜನ ಪುತ್ರ ಪ್ರಹ್ಲಾದನು ಭಗವಂತನ ಅಸ್ತಿತ್ವವು ಎಲ್ಲೆಡೆಗೆ ಇದೆ ಎಂದು ತನ್ನ ಸ್ಥಿರಭಕ್ತಿ ತೋರಿಸಿದ್ದಾನೆ ತನ್ನ ತಂದೆಗೆ. ಪ್ರಹ್ಲಾದನ ಶ್ರೇಷ್ಠತರವಾದ ಭಗವದ್ಭಕ್ತಿಯೇ ನಾರಾಯಣನ "ನರಸಿಂಹಾವತಾರ"ಕ್ಕೆ ಕಾರಣವಾಯಿತು.

ಭಗವಂತನಲ್ಲಿ ಮಾಡುವ ದ್ವೇಷವೂಸಹ ಭಕ್ತಿಯಾಗಿಯೇ ಪರಿಣಮಿಸಿದ್ದನ್ನು ನಾವು ರಾವಣ - ಕುಂಭಕರ್ಣ, ಕಂಸ - ಶಿಶುಪಾಲ, ಹಿರಣ್ಯಾಕ್ಷ - ಹಿರಣ್ಯಕಶಿಪು ಇವರ ಜೀವನದಿಂದ ತಿಳಿಯುತ್ತೇವೆ. ರಾವಣನ ವಧೆಗಾಗಿ ರಾಮಾವತಾರವೂ, ಶಿಶುಪಾಲ ವಧೆಗಾಗಿ ಕೃಷ್ಣಾವತಾರಗಳೇ ಸಂಭವಿಸಿರುತ್ತವೆ. "ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ" ಎಂದು ಶ್ರೀಕೃಷ್ಣಪರಮಾತ್ಮನೇ ಹೇಳಿರುವುದನ್ನು ನಾವು ಗೀತೆಯಲ್ಲಿ ಕಾಣುತ್ತೇವೆ.

ಭಗವಂತನಿಗೆ ಭಕ್ತರೆಲ್ಲ ಸರಿಸಮಾನರು ಎನ್ನುವುದಕ್ಕೆ ಕನಕದಾಸ, ಬೇಡರಕಣ್ಣಪ್ಪ, ಸೂರದಾಸ, ತುಲಸೀದಾಸ ಇವರೆಲ್ಲರೂ ಉದಾಹರಣೆಯಾಗಿದ್ದಾರೆ. ಭಗವಂತನು ಭಕ್ತರ ಆಧೀನ. ತನ್ನ ಭಕ್ತರಿಗಾಗಿ ಬೇಕಾದ ಕಡಿಮೆ ತರಗತಿಯ ಕೆಲಸಗಳನ್ನು ಸಹ ಮಾಡಲು ಸಿದ್ಧನಾಗಿರುತ್ತಾನೆ. ಇದಕ್ಕೆ ಉತ್ತಮ ಉದಾಹರಣೆ, ಶ್ರೀಕೃಷ್ಣನು ಅರ್ಜುನ ಸಾರಥಿಯಾದದ್ದು ಕುರುಕ್ಷೇತ್ರದ ರಣಭೂಮಿಯಲ್ಲಿ. ಭಕ್ತ ಪುಂಡರೀಕನು ತನ್ನ ವೃದ್ಧ ಮಾತಾಪಿತೃಗಳ ಸೇವೆಯಲ್ಲಿಯೇ ನಿರತನಾದವನು. ಸ್ವತಃ ಭಗವಂತನೇ ಅವನ ಬಾಗಿಲಿಗೆ ಬಂದಾಗ್ಯೂ ಒಂದು ಇಟ್ಟಿಗೆ ಕಲ್ಲನ್ನು ಕೊಟ್ಟು ತನ್ನ ಮಾತಾ - ಪಿತೃಗಳ ಶುಶ್ರೂ

ಷೆಯಲ್ಲಿ ತೊಡಗುತ್ತಾನೆ. ಪುಂಡರೀಕನು ಪ್ರತೀಕ್ಷೆ ಮಾಡುತ್ತಾ ಇಟ್ಟಿಗೆಯ ಮೇಲೆ ನಿಂತಿರುವ ಪಂಢರಪುರದ ವಿಠ್ಠಲನೇ, ಪುಂಡರೀಕನು ಮಾತಾಪಿತೃಗಳ ಸೇವೆಯಲ್ಲಿಯೇ ಭಗವಂತನನ್ನು ಕಾಣುವುದಕ್ಕೆ ಸಾಕ್ಷಿಯಾಗಿದ್ದಾನೆ.

ತನ್ನ ದೇಹಾಭಿಮಾನವನ್ನು ಬಿಟ್ಟು ಸಂಪೂರ್ಣ ಶರಣಾಗತಿ ತೋರಿದ ಮೇಲೆಯೆ ಶ್ರೀಕೃಷ್ಣನು ದ್ರೌಪದಿಗೆ ಅಕ್ಷಯಾಂಬರವನ್ನು ನೀಡುತ್ತಾನೆ. ಕೃಷ್ಣ ಭಕ್ತಿಯಲ್ಲಿ ತನ್ಮಯರಾದ ವೃಂದಾವನದ ಗೋಪಿಯರಿಗೆ ಎಲ್ಲೆಡೆಗೆ ಮುರಲೀ ಕೃಷ್ಣನೇ ಕಾಣುತ್ತಾನೆ. ಶ್ರೀಕೃಷ್ಣನು ಮಧುರೆಗೆ ಹೋಗುತ್ತಾನೆಂದು ವಿರಹಕ್ಕೆ ತುತ್ತಾದ ಗೋಪಿಯರ ಸ್ಥಿತಿಯನ್ನು ಶುಕ್ರಾಚಾರ್ಯರು ಪರೀಕ್ಷಿತರಾಜನಿಗೆ ಭಾಗವತದಲ್ಲಿ ಈ ರೀತಿ ಹೇಳುತ್ತಾರೆ--

ಏವಂ ಬ್ರುವಾಣಾಂ ವಿರಹಾತುರಾ ಬೃಶಂ
ವ್ರಜಸ್ತ್ರೀಯಃ ಕೃಷ್ಣವಿಪತ್ತಮಾನಸಾಃ
ವಿಸೃಜ್ಯ ಲಜ್ಞಾಂ ರುರುದುಃ ಸ್ಮಸುಸ್ವರಂ
ಗೋವಿಂದ! ದಾಮೋದರ! ಮಾಧವೇತಿ

ಕೃಷ್ಣನಲ್ಲಿಯೇ ಅತ್ಯಂತ ಆಸಕ್ತಿ ಹೊಂದಿದ ಮನಸ್ಸುಳ್ಳವರಾದ ಗೋಪಿಕೆಯರು, ಅವನ ವಿರಹ ವ್ಯಥೆಯನ್ನು ತಡೆಯಲಾರದೆ, ಲಜ್ಜೆಯನ್ನು ತೊರೆದು, ಹಾ ಗೋವಿಂದ! ಹಾ ದಾಮೋದರ! ಹಾ ಮಾಧವ ಎಂದು ಗಟ್ಟಿಯಾಗಿ ಅಳತೊಡಗಿದರು.

ಇಂತಹ ಗೋಪಿಯರ ತನ್ಮಯತೆ ಪರಮಭಕ್ತಿಯೆನಿಸುವದು.

ವಿಪದಃ ಸಂತುನಃ
ಶಶ್ವತತ್ರ ಜಗದ್ಗುರೋ!
ಭವತೊ ದರ್ಶನಂ
ಯಸ್ಯಾದ್ ಪುನರ್ಭವ ದರ್ಶನಮ್

"ಜಗದ್ಗುರುವೇ, ಭಗವಂತನೇ ನಮಗೆ ವಿಪತ್ತುಗಳು ಬರುತ್ತಿರಲಿ" ಎನ್ನುತ್ತಾಳೆ ಕುಂತಿದೇವಿ. ವಿಪತ್ಕಾಲವು ಪ್ರಾಪ್ತವಾದರೆ ಪರಮದಯಾಳುವಾದ ಪರಮಾತ್ಮ ಬಂದೇ ಬರುತ್ತಾನೆ. ಕನಿಕರ ತೋರಿಸುತ್ತಾನೆ ಎನ್ನುವದೇ ಕುಂತಿಯ ಮನೋಭಿಲಾಷೆ. ಆದುದರಿಂದ ವಿಪತ್ತುಗಳಿಂದ ಪರಮಾತ್ಮನ ಚಿಂತನೆ ಹೆಚ್ಚಿ, ಸಂಸಾರಬಂಧನ ಕಳಚುತ್ತದೆಂದು ನಂಬಿದವಳು ಕುಂತಿ. ಇದು ಅವಳ ಪರಮ ಭಕ್ತಿಯ ದ್ಯೋತಕ - ನಾವಾದರೋ "ಸಂಕಟಬಂದಾಗ ವೆಂಕಟರಮಣ" ಎನ್ನುತ್ತೇವೆ. ಆ ವೇಳೆಗೆ ಮಾತ್ರ ಪರಮಾತ್ಮನ ಅರ್ಚನೆ, ಪೂಜೆ, ದೇವಸ್ಥಾನಕ್ಕೆ ಹೋಗುವುದು ಮಾಡುತ್ತೇವೆ. ಸಂಕಟಗಳು ಪರಿಹಾರವಾದ ನಂತರ ಪರಮಾತ್ಮನು ನಮ್ಮಿಂದ ದೂರನೇ. ಆದರೆ ಭಗವದ್ಭಕ್ತರು ಪರಮಾತ್ಮನ ಭಕ್ತಿಯೇ ಸರ್ವಸ್ವವೆಂದು ದೃಢವಾಗಿ ನಂಬಿದವರು.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ -- ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5--00 ಪ್ರಾ 5--30 | ಪ್ರಾ 5--00 ಪ್ರಾ 5--30 |
| ವಿಶ್ವರೂಪ ಸರ್ವದರ್ಶನ | ಪ್ರಾ 5--30 ಪ್ರಾ 6--00 | ಪ್ರಾ 5--30 ಪ್ರಾ 6--00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6--00 ಪ್ರಾ 6--30 | ಪ್ರಾ 6--00 ಪ್ರಾ 6--30 |
| ಸಹಸ್ರನಾಮಾರ್ಚನೆ | ಪ್ರಾ 6--30 ಪ್ರಾ 7--00 | ಪ್ರಾ 6--30 ಪ್ರಾ 7--00 |
| ಮೊದಲನೇ ಗಂಟೆ | ಪ್ರಾ 7--00 ಪ್ರಾ 7--30 | ಪ್ರಾ 7--00 ಪ್ರಾ 7--30 |
| ಸರ್ವದರ್ಶನ | ಪ್ರಾ 7--30 ಪ್ರಾ 10--00 | *ಅಭಿಷೇಕ ಪ್ರಾ 7--30 ಪ್ರಾ 8--30<br>ಸಮರ್ಪಣ ಪ್ರಾ 8--30 ಪ್ರಾ 9--30 |
| 2ನೇ ಅರ್ಚನೆ 2ನೇ ಗಂಟೆ | ಪ್ರಾ 10--00 ಪ್ರಾ 10--30 | ಪ್ರಾ 9--30 ಪ್ರಾ 10--30 |
| *ಆರ್ಜಿತ | | ಕಲ್ಯಾಣೋತ್ಸವ ಪ್ರಾ 10--30 ಮ 12--00 |
| ಸರ್ವದರ್ಶನ | ಪ್ರಾ 10--30 ಸಂ 6--30 | ಪ್ರಾ 10--30 ಸಂ 6--30 |
| ರಾತ್ರಿ ಕೈಂಕರ್ಯ ರಾತ್ರಿ ಗಂಟೆ | ಸಂ 6--30 ರಾ 7--00 | ಸಂ 6--30 ರಾ 7--00 |
| ಸರ್ವದರ್ಶನ | ರಾ 7--00 ರಾ 8--45 | ರಾ 7--00 ಪ್ರಾ 8--45 |
| ಏಕಾಂತ ಸೇವೆ | ರಾ 8--45 ರಾ 9--00 | ರಾ 8--45 ರಾ 9--00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ. 200--00 |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ. 100--00 |
| ಅರ್ಚನೆ (ಒಂದು ವರ್ಷ) | ರೂ. 42--00 |
| ಶಾಶ್ವತ ನಿತ್ಯಾರ್ಚನೆ | ರೂ. 542--00 |

ನೀರನ್ನು ಹಿಡಿಯಲು ಪಾತ್ರೆಯು ಅವಶ್ಯಕತೆಯಿರುವಂತೆ, ಪರಮಾತ್ಮನನ್ನು ಪಡೆಯಲು ದೃಢಭಕ್ತಿಯು ಅವಶ್ಯ. ನದಿಯು ಸಾಗರವನ್ನು ಸೇರಬಯಸಿ ಸತತವಾಗಿ ಮುನ್ನುಗ್ಗುವಂತೆ, ಭಕ್ತನು ನಿಷ್ಕಾಮ ಭಕ್ತಿಯಿಂದಲೇ, ಪರಮಾತ್ಮನಲ್ಲಿ ಒಂದಾಗುವನು. ಇಹದ ಪದಾರ್ಥಗಳನ್ನು ಪಡೆಯಬಯಸುವವನ ತಾಪತ್ರಯಗಳು ಹೆಚ್ಚುತ್ತಲೇ ಹೋಗುತ್ತವೆ. ಪರಮಾತ್ಮನ ಭಕ್ತಿಯಿಂದ ತಾಪತ್ರಯಗಳು ನಾಶವಾಗಿ, ಆತ್ಮಶಾಂತಿ ಲಭಿಸುವುದು.

ನ ಕಾಮಃ ಕಾಮಾನಾಂ
ಉಪಭೋಗೇನ ಶ್ಯಾಮ್ಯತೀ
ಹವಿಷಾ ಕೃಷ್ಣವರ್ತೇಮ
ಭೂಯೋಭಿ ವರ್ಧತೇ

ಇದು ಪರಮಾತ್ಮನ ನುಡಿ; ಗೀತೆಯು ಹೇಳುವಂತೆ ವಸ್ತುಗಳು ಐಹಿಕ ಅಂದರೆ ಅನಿತ್ಯ. ಅವುಗಳ ಲಾಲಸೆ ಎಂದೂ ಶಾಂತಿಯನ್ನು ಕೊಡದು, ಅನುಭವಿಸಿದಷ್ಟು ಇನ್ನೂ ಹೆಚ್ಚಿಗೆ ಪಡೆಯದೇಕೆಂಬ ಹಂಬಲವಾಗುತ್ತದೆ. ಆದರೆ ಪರಮಾತ್ಮನ ಭಕ್ತಿ ಪರಮಾನಂದವನ್ನು ಕೊಡುವುದು. ಮನಸ್ಸಿನ ಆನಂದವೇ ಪರಮಾನಂದ. ಅದು ನಿಷ್ಕಾಮಭಕ್ತಿಯಿಂದಲೇ ಸಾಧ್ಯ.

ಭಕ್ತಿ ಮಾಡಲು ತಾರ್ಕಿಕಬುದ್ಧಿ, ಶಾಸ್ತ್ರಾಧಾರಗಳಲ್ಲಿ ಪ್ರವೀಣತೆ ಬೇಡ, ಶೌಚ, ದಯಾ, ಧರ್ಮ, ಪ್ರೇಮ - ಶಾಂತಿ; ತ್ಯಾಗ ಮೊದಲಾದವುಗಳನ್ನು ಪಾಲಿಸುವುದರಿಂದ, ಸತ್ಸಂಗ, ಸದಾಚಾರಮಾರ್ಗದಲ್ಲಿ ನಡೆಯುವುದರಿಂದ, ಭಗವಂತನ ಪ್ರೀತಿಗೆ ಪಾತ್ರರಾಗುತ್ತೇವೆ. ಭಕ್ತನ ಸದ್ವರ್ತನೆಯೇ ಆತನಿಗೆ ಆನಂದವನ್ನು ಕೊಡುವುದೇ ಹೊರತು ಶಾಸ್ತ್ರಾರ್ಥಗಳಲ್ಲ. ಶಾಸ್ತ್ರಾರ್ಥಗಳು ಸದ್ವರ್ತನೆಗೆ ಕೇವಲ ಮಾರ್ಗದರ್ಶಿಗಳಾಗುತ್ತವೆ. ಶ್ರುತಿಗಳು ಸಂತರಲ್ಲಿ ಸ್ಪಷ್ಟಗೊಳ್ಳುತ್ತವೆ.

ಭಕ್ತಿಮಾರ್ಗದಲ್ಲಿ ಹೋಗಬಯಸುವವರಿಗೆ, ಸಾಧುಸಂತರು ಮಾರ್ಗದರ್ಶಕರಾಗುತ್ತಾರೆ.

"ದುರ್ಲಭಮ್ ತ್ರಯಮೇವೈತತ್
ದೈವಾನುಗ್ರಹ ಹೇತುಕಮ್
ಮನುಷ್ಯತ್ವಂ, ಮುಮುಕ್ಷತ್ವಂ,
ಮಹಾಪುರುಷ ಸಂಶ್ರಯಮ್"

ಭಗವಂತನ ಅನುಗ್ರಹದಿಂದಲೇ ದೊರೆಯುವುವು ಮಾನವಜನ್ಮ, ಮೋಕ್ಷಪಡೆಯುವ ಇಚ್ಛೆ ಮತ್ತು ಮಹಾತ್ಮರ ಸಂಗ, ಐಹಿಕಸಂಪತ್ತುಗಳ ಆಶೆಯನ್ನು ಕುಗ್ಗಿಸಿ ಪರಮಾತ್ಮನಲ್ಲಿ ಭಕ್ತಿಯನ್ನು ಹೆಚ್ಚಿಸಲು, ಸತ್ಸಂಗವು ಸಹಾಯವಾಗುವುದು. ಜೀವನದ ಜಂಜಾಟಗಳಿಂದ ಮುಕ್ತರಾಗಲು ಸತ್ಸಂಗವೇ ಸುಲಭವಾದ ಮಾರ್ಗ.

ಸತ್ಸಂಗತ್ವೇ ನಿಸ್ಸಂಗತ್ವಮ್
ನಿಸ್ಸಂಗತ್ವೇ ನಿರ್ಮೋಹತ್ವಂ
ನಿರ್ಮೋಹತ್ವೆ ನಿಶ್ಚಲತತ್ವಮ್
ನಿಶ್ಚಲತತ್ವೇ ಜೀವನ್ಮುಕ್ತಿಃ

ಎಂದು ಶಂಕರ ಭಗವತ್ಪಾದರು ತಮ್ಮ "ಮೋಹ ಮುದ್ಗರ"ದಲ್ಲಿ ಹೇಳಿದ್ದಾರೆ.

ಭಗವಂತನ ನಾಮೋಚ್ಚಾರಣೆಯಿಂದ, ಪಾಪಗಳು ನಾಶವಾಗುವ ಹಾಗೆ, ಭಗವದ್ಭಕ್ತರ ನಾಮೋಚ್ಚಾರಣೆಗಳು ಸಹ ಪಾಪಗಳನ್ನು ನಾಶಗೊಳಿಸುತ್ತವೆ.

ಭಗವಂತನ ಭಕ್ತಿಯ ಮುಂದೆ ಐಹಿಕಸಂಪತ್ತು, ಪ್ರಜಾಸಂತತಿ, ಸಾಮ್ರಾಜ್ಯ ಆಯುಸ್ಸು, ಯಃಕಶ್ಚಿತ್, ಇದಕ್ಕೆ ನಚಿಕೇತನನ್ನು ಉದಾಹರಿಸಬಹುದು. ನಶ್ವರ ವಸ್ತುಗಳನ್ನು ಬಯಸದೇ, ಶ್ರೇಯಸ್ಕಾರ್ಯನಾಗಿ, ಯಮಧರ್ಮನಿಂದ "ಆತ್ಮತತ್ವ" ವನ್ನು ಅರಿತು "ಓಂಕಾರ"ದ ಮೂಲಕ ಬ್ರಹ್ಮಸಾಕ್ಷಾತ್ಕಾರವನ್ನು ಪಡೆದು ಮುಕ್ತನಾದನು. ಆದುದರಿಂದ ಮುಮುಕ್ಷುಗಳಿಗೆ ಪರಮಾತ್ಮನನ್ನು ತಿಳಿಯಲು ಭಕ್ತಿಯೇ ಪರಮಸಾಧನೆಯಾಗಿದೆ.

ದೇವರಲ್ಲಿರಿಸುವ ಭಕ್ತಿಯನ್ನು ಯಾರು ಗುರುಗಳಲ್ಲಿಯೂ ಇರಿಸುವರೋ, ಅವರಿಗೆ ಪರಮತತ್ವವನ್ನು ಅರಿಯಲು ಸುಲಭವಾಗುವುದು. "ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ" ಎಂದು ದಾಸಶ್ರೇಷ್ಠ ಪುರಂದರರು ಹೇಳಿದ್ದಾರೆ. ಐಹಿಕ ವಸ್ತುಗಳ ಮಾಯೆಯಿಂದ ಅಜ್ಞಾನದ ಮುಸುಕು ಹಾಕಲ್ಪಟ್ಟ ನಾವೆಲ್ಲರು ಕುರುಡರಾಗಿರುತ್ತೇವೆ. ನಮ್ಮ ಈ ಅಂಧತ್ವವನ್ನು ಕಳೆಯಲು ಗುರುವಿನ ಮಾರ್ಗದರ್ಶನ ಅಂಜನವಾಗಿದೆ.

"ನೆನೆದವರ ಮನದಲ್ಲಿ" ಎನ್ನುವಂತೆ ಭಗವಂತನು ಭಕ್ತರ ಸ್ಪಂದನಕ್ಕೆ ಮಿಡಿಯುತ್ತಾನೆ. ಅವರ ಕರೆಗೆ ಓಗೋಡುತ್ತಾನೆ. ಇದಕ್ಕೆ ಸರಿಯಾದ ಉದಾಹರಣೆ ಗಜೇಂದ್ರಮೋಕ್ಷದ ಕಥೆ. ಜನ್ಮಾಂತರದ ಸಂಸ್ಕಾರಬಲದಿಂದ ನೆನಿಸಿಕೊಂಡು ಗಜೇಂದ್ರನು ಭಗವಂತನ ಸ್ತುತಿಸಿದ್ದು ಸ್ತೋತ್ರರತ್ನಾಕರ ಮಹಾಮಣಿಗಳಲ್ಲಿ ಶ್ರೇಷ್ಠಸ್ಥಾನ ಪಡೆದಿದೆ.

ಪರಮಾತ್ಮನಲ್ಲಿ ಭಕ್ತಿಮಾಡುವುದು ಹೇಗೆ?

ಮಗುವು ತಾಯಿಗೆ ಹೇಳುತ್ತದೆ "ಅಮ್ಮಾ ನನಗೆ ನಿದ್ರೆ ಬರುತ್ತಿದೆ. ಹಸಿವಾದಾಗ ಎಚ್ಚರಿಸಿ ಆಹಾರ ಕೊಡು" ಭಗವಂತನಲ್ಲಿ ನಂಬಿಕೆ ಯಿಡುವುದೇ ಶ್ರದ್ಧೆ - ಶ್ರದ್ಧೆಯಿಂದ ಜ್ಞಾನ - ಜ್ಞಾನದಿಂದ ಧೈರ್ಯ - ಶಾಂತಿ - ಹೀಗೆ ಪರಮಾತ್ಮನಲ್ಲಿ ಸಂಪೂರ್ಣ ಭರವಸೆಯನ್ನಿಟ್ಟು ಕರ್ಮಫಲದ ಅಪೇಕ್ಷೆಯಿಲ್ಲದೆ ಕರ್ಮಗಳನ್ನು ಆಚರಿಸುತ್ತಾ ಮುಂದೆ ಸಾಗಿದರೆ, ಆ ಭರವಸೆಯೇ ತಾಯಿಯಂತೆ ನಮ್ಮನ್ನು ಅಜ್ಞಾನವೆಂಬ ತಮಸ್ಸಿನಿಂದ ಎಚ್ಚರಿಸುತ್ತದೆ. ಮತ್ತು ತಾಯಿ ಮಗುವಿಗೆ ಕೊಡುವ ಆಹಾರದಂತೆ, ನಮಗೆ ಪರಮಾತ್ಮನ ಸಾಕ್ಷಾತ್ಕಾರಪಡೆಯಲು ಸಹಾಯವಾಗುತ್ತದೆ. ಆ ಭರವಸೆಯನ್ನೇ ನಾವು ಭಗವದ್ಭಕ್ತಿ, ಭಗವಂತನ ಮೇಲಿನ ಪ್ರೇಮವೆನ್ನುತ್ತೇವೆ.

ಇಂಥ ನಿಷ್ಕಾಮ ಭಕ್ತಿಮಾಡಲು ಬೇಕಾಗುವ ಸಾಧನಗಳಾವು? ಫಲಾಪೇಕ್ಷೆಯಿಲ್ಲದೆ ಮಾಡುವ ಭಕ್ತಿ ಅಂದರೆ ನಿಷ್ಕಾಮಭಕ್ತಿಯೇ ಅತಿ ಶ್ರೇಷ್ಠಸಾಧನ. ಇದಕ್ಕೆ ಹೊರತು ಇನ್ನೊಂದು ಸಾಧನವು ಇಲ್ಲವೇ ಇಲ್ಲ ಎನ್ನಬಹುದು. ಭಗವಂತನಲ್ಲಿ ಸಂಪೂರ್ಣ ಭರವಸೆ (ಶ್ರದ್ಧೆ), ದೀನದಲಿತರಲ್ಲಿ ಅಶಕ್ತರಲ್ಲಿ ಪ್ರೀತಿ, ತ್ಯಾಗ, ಇದ್ದು ವೈರಾಗ್ಯ ಬೆಳೆಯಿಸಲು ಮಾಡುವಂಥ ಕಾರ್ಯಗಳೇ ಭಕ್ತಿಯ ಸಾಧನಗಳು. ಇವೇ ನಿಜವಾದ ಭಕ್ತನ ಲಕ್ಷಣಗಳೆನ್ನಬಹುದು.

ಹೀಗೆ ಜ್ಞಾನಯೋಗ, ಕರ್ಮಯೋಗಗಳಿಗಿಂತ, ಭಕ್ತಿಯೋಗವೇ ಸಾಮಾನ್ಯ ಮಾನವರಿಗೆ, ಸಂಸಾರ ಬಂಧನವನ್ನು ಕಳಚಿ, ಪರಮಾತ್ಮನನ್ನು ಪಡೆಯುವ ಸಾಧನವಾಗಿದೆ. ಭಗವಂತನನ್ನು ಆರಾಧಿಸುವುದು ಭಗದ್ಭಕ್ತರನ್ನು ಆರಾಧಿಸುವುದು ಒಂದೇ. ಭಕ್ತರು ಭಗವಂತನ ಸ್ವರೂಪರು.

ಸನತ್ಕುಮಾರ, ವ್ಯಾಸ, ಶಾಂಡಿಲ್ಯ, ಗರ್ಗ, ವಿಭೀಷಣ, ಹನುಮಂತ, ಪರಾಶರ, ನಾರದ, ಶುಕ - ಶೌನಕ, ಅಂಬರೀಷ, ಭೀಷ್ಮ ರುಕ್ಮಾಂಗದ, ಅರ್ಜುನ, ಅಜಮಿಳ, ಶಬರಿ, ಮೀರಾಬಾಯಿ ಇವರೆಲ್ಲರು ಶ್ರೇಷ್ಠತಮರಾದ ಭಗವದ್ಭಕ್ತರು. ಭಗವಂತನ ನಾಮಸಂಕೀರ್ತನೆ ಮಾಡುತ್ತಾ, ಲೋಕ ಕಲ್ಯಾಣಕ್ಕಾಗಿ ತೀರ್ಥ ಕ್ಷೇತ್ರಗಳನ್ನು ಸಂಚರಿಸುತ್ತಾ, ಅಲ್ಲಿ ಬರುವ ಯಾತ್ರಾರ್ಥಿಗಳನ್ನು ಪಾವನಗೊಳಿಸುತ್ತಾರೆ. ಇಂಥವರ ಪಾದ ಧೂಳಿಯಿಂದಲೇ ತೀರ್ಥಗಳು ಪಾವನವಾಗುತ್ತವೆ. ಇವರ ಉಪದೇಶವು ಅಮೃತ ಸಮಾನವಾದದ್ದು.

ಆದುದರಿಂದ ಭಕ್ತನು ದಾಂಭಿಕನಾಗಿದೆ, ಪರರಿಗಾಗಿ ಭಕ್ತಿಯ ಪ್ರದರ್ಶನಮಾಡದೆ, ತನ್ನ ಆತ್ಮೋನ್ನತಿಗಾಗಿ ಭಗವಂತನ ಸ್ಮರಣ, ಚಿಂತನ, ಮನನಧ್ಯಾನ ಮಾಡಬೇಕು. ಕಾಮಿನಿ - ಕಾಂಚನದ ಚಿಂತೆ ಬಿಡಬೇಕು. ಧರ್ಮದಿಂದ ಧನವನ್ನು ಗಳಿಸಿ, ತನ್ನ ಪರಿವಾರದ ಯೋಗಕ್ಷೇಮಕ್ಕೆ ಅದನ್ನು ಉಪಯೋಗಿಸಿ, ಮಿಕ್ಕುದನ್ನು ದೀನದಲಿತರಿಗೆ ದಾನಮಾಡಬೇಕು. ಧನದ ಸಂಗ್ರಹಣೆ ಮಾಡಬಾರದು. ಏಕೆಂದರೆ ಧನವೇ ಎಲ್ಲ ದುರಾಶೆಗಳ ತವರು ಎನಿಸುತ್ತದೆ.

ಇಂಥ ಭಕ್ತರೇ ಭಗವಂತನ ಪರಮಾನುಗ್ರಹಕ್ಕೆ ಪಾತ್ರರು. ಭಗವಂತನ ಕೃಪೆಯಾದಮೇಲೆ ನಮಗೆ ಏನು ತಾನೇ ಬೇಕು?



# ಉಡುಪಿಯಲ್ಲಿ ಪರ್ಯಾಯ

---ಶ್ರೀನಿವಾಸ ತಂತ್ರಿ.

೧೯೯೬ ಜನವರಿ ೧೮ ರಂದು ಉಡುಪಿಯಲ್ಲಿ ಪರ್ಯಾಯೋತ್ಸವದ ಸಂಭ್ರಮ. ಹದಿನಾರು ವರ್ಷಗಳಿಗೊಮ್ಮೆ ಅಷ್ಟಮಠದ ಯತಿಗಳು ಸರದಿಯಂತೆ ಎರಡು ವರ್ಷಕಾಲ ಶ್ರೀಕೃಷ್ಣನ ಪೂಜೆಗಾಗಿ ಪರ್ಯಾಯ ದೀಕ್ಷೆ ಕೈಗೊಳ್ಳುವರು. ವಾದಿರಾಜರ ಕಾಲದವರೆಗೆ ಎರಡು ತಿಂಗಳ ಅವಧಿಯ ಪರ್ಯಾಯ ಪದ್ಧತಿಯಿತ್ತು. ಅದನ್ನು ವಾದಿರಾಜರು ಎರಡು ವರ್ಷಗಳಿಗೆ ಪರಿವರ್ತಿಸಿ ಶ್ರೀಕೃಷ್ಣಮಠದ ಅಧಿಕಾರ ಹಸ್ತಾಂತರ ಪ್ರಕ್ರಿಯೆಗೆ "ಪರ್ಯಾಯೋತ್ಸವ" ರಾಷ್ಟ್ರೀಯ ಪರ್ವದ ಮಹತ್ವ ನೀಡಿದರು. ೧೫೨೨ - ೨೩ ರಲ್ಲಿ ಮೊದಲ್ಗೊಂಡ ಎರಡು ವರ್ಷಗಳ ಪರ್ಯಾಯ ಪದ್ಧತಿಯಲ್ಲಿ ವಾದಿರಾಜರು ತಮ್ಮ ಮೊದಲ ಎರಡು ವರ್ಷದ ಪರ್ಯಾಯವನ್ನು ತಮ್ಮ ೫೨ನೇ ವಯಸ್ಸಿನಲ್ಲಿ (೧೫೩೨-೩೩)ನೆರವೇರಿಸಿದರು. ಅನುಕ್ರಮವಾಗಿ ಅಷ್ಟಮಠಗಳು ತಮ್ಮ ದ್ವೈವಾರ್ಷಿಕ ಪರ್ಯಾಯದ ೨೯ ಆವರ್ತಗಳನ್ನು ಪೂರ್ತಿಗೊಳಿಸಿ ೧೯೮೬-೮೭ ರಲ್ಲಿ ಫಲಿಮಾರು ಮಠದಿಂದ ೩೦ನೇ ಪರ್ಯಾಯ ಆವರ್ತನ ಪ್ರಾರಂಭಗೊಂಡಿದೆ.

ಇದೇ ಜನವರಿ ೧೭ ರಂದು ಶೀರೂರುಮಠದ ಶ್ರೀ ಶ್ರೀಲಕ್ಷ್ಮೀ ವರತೀರ್ಥರು ತಮ್ಮ ದ್ವಿತೀಯ ಪರ್ಯಾಯದ ಮಂಗಲೋತ್ಸವ ಆಚರಿಸಲಿದ್ದು ಜನವರಿ ೧೮ರ ಮುಂಜಾನೆ ಶ್ರೀಕೃಷ್ಣಮಠದ ಮುಂದಿನ ಎರಡು ವರ್ಷ ಕಾಲದ ಸರ್ವಾಧಿಕಾರವನ್ನು ಪರ್ಯಾಯ ಪೀಠಾರೋಹಣ ಮಾಡಲಿರುವ ಸೋದೆ ಮಠದ ಶ್ರೀ ಶ್ರೀ ವಿಶ್ವೋತ್ತಮತೀರ್ಥರಿಗೆ ವಹಿಸಿಕೊಡಲಿದ್ದಾರೆ. ಸೋದೆ ಶ್ರೀಗಳವರು ಇದುವರೆಗೆ ೧೯೪೮; ೧೯೬೪ ಮತ್ತು ೧೯೮೦ ರಲ್ಲಿ ಶ್ರೀಕೃಷ್ಣಪೂಜಾ ದೀಕ್ಷೆಯ ಮೂರು ಪರ್ಯಾಯಗಳನ್ನು ಯಶಸ್ವಿಯಾಗಿ ಪೂರೈಸಿ ೧೯೯೬ ಜನವರಿ ೧೮ರ ಚತುರ್ಥ ಪರ್ಯಾಯ ಪೀಠಾರೋಹಣಕ್ಕೆ ಭರದಿಂದ ಸಿದ್ಧರಾಗುತ್ತಿದ್ದಾರೆ. ಪುಣ್ಯಕ್ಷೇತ್ರ ಸಂದರ್ಶನ ಪೂರೈಸಿ ಉಡುಪಿ ನಗರ ಪ್ರವೇಶಿಸಲಿರುವ ಪರ್ಯಾಯ ಶ್ರೀಗಳವರಿಗೆ ನಾಗರಿಕರು ಭವ್ಯ ಸ್ವಾಗತ ನೀಡಲಿದ್ದಾರೆ.

## ಸೋದೆಮಠ

ಮಧ್ವಾಚಾರ್ಯರ ಅಷ್ಟಮಠಗಳ ಪೈಕಿ ಏಳು ಮಠಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿದ್ದರೆ ಸೋದೆಯೊಂದೇ ಉತ್ತರ ಕನ್ನಡ ವ್ಯಾಪ್ತಿಗೆ ಸೇರಿದ ಮಠವೆನಿಸಿದೆ. ಉಡುಪಿ ರಥಬೀದಿಯ ಆಗ್ನೇಯ ಪಾರ್ಶ್ವದಲ್ಲಿ ಪುತ್ತಿಗೆ ಮಠಕ್ಕೆ ತಾಗಿಕೊಂಡಂತೆ ಸೋದೆ. ಮ. ೨೮. ಮಠದ ಮೂಲಯತಿ ವಿಷ್ಣುತೀರ್ಥರಿಗೆ ಆಚಾರ್ಯ ಮಧ್ವರು ಅನುಗ್ರಹಿಸಿದ ಪಟ್ಟದ ದೇವರು ಶ್ರೀ ಭೂವರಾಹ, ಭೂದೇವಿಯನ್ನು ತೊಡೆಯಲ್ಲಿ ಕುಳ್ಳಿರಿಸಿಕೊಂಡು ಹಾವಿನ ಹೆಡೆಯ



ಮೇಲೆ ಕಾಲೂರಿನಿಂತ ಭಂಗಿಯಲ್ಲಿರುವ ಭೂವರಾಹ ವಿಗ್ರಹ ಅತ್ಯಪೂರ್ವವಾದದ್ದು. ಹಯಗ್ರೀವ ವಾದಿರಾಜರ ಪ್ರಧಾನ ಉಪಾಸ್ಯ ಮೂರ್ತಿಯಾಗಿ ಸೋದೆಮಠದಲ್ಲಿ ಪೂಜೆಗೊಳ್ಳುತ್ತಿದ್ದಾನೆ. ಸೋದೆ ಮಠ ಪರಂಪರೆಯಲ್ಲಿ ೨೦ ನೆಯವರಾದ ವಾದಿರಾಜರು ಮಹಾಮಹಿಮರೆನಿಸಿಕೊಂಡರು. ಮಟ್ಟು ಗ್ರಾಮದ ಕೃಷಿಕರಿಗೆ "ಮಟ್ಟುಗುಳ್ಳ" ವರಪ್ರಸಾದವಾಗಿತ್ತರು. ಅವರು ಉಡುಪಿಯ ಇತಿಹಾಸದಲ್ಲಿ ಹೊಸ ಅಧ್ಯಾಯ ಸೃಷ್ಟಿಸಿದವರು.

ಗುರು ವಾದಿರಾಜರ ಜನ್ಮಭೂಮಿ ಕುಂದಾಪುರ ತಾಲೂಕಿನ ಕುಂಭಾಸಿ ಸಮೀಪದ ಹೂವಿನ ಕೆರೆಯಲ್ಲಿಯೂ ಸೋದೆ ಮಠದ ಶಾಖಾಮಠವಿದೆ. ಉದ್ಯಾವರ; ಪಂಜಿಮಾರು; ಇನ್ನಂಜೆ (ಉಂಡಾರು); ನಾರಳಗಳಲ್ಲಿ ಶಾಖಾಮಠಗಳಿವೆ. ಹಿಂದೆ ಅಷ್ಟಮಠಗಳಲ್ಲಿ ಆಸ್ತಿಪಾಸ್ತಿಯಲ್ಲಿ ಸೋದೆಮಠ ಅತ್ಯಂತ ಶ್ರೀಮಂತವಾಗಿತ್ತು. ಭೂಮಸೂದೆ ಕಾಯಿದೆಯಿಂದಾಗಿ ಬಹುಪಾಲು ಆಸ್ತಿ ಪರಾಧೀನಗೊಂಡಿತು. ೧೬ನೆಯ ಶತಮಾನದಲ್ಲಿ ಸೋದೆ ಅರಸಪ್ಪ ನಾಯಕನ ಆಡಳಿತಕ್ಕೆ ಸೇರಿದ್ದ ಜಾಗದಲ್ಲಿ ಅವನ ಪ್ರಾರ್ಥನೆಯಂತೆ ವಾದಿರಾಜರು ಸೋದೆಯಲ್ಲಿ ಮಠ ಕಟ್ಟಿಸಿದರು. ಅದು ಇಂದಿಗೂ ಸೋದೆ ವಾದಿರಾಜ ಮಠವೆಂದೇ ಪ್ರಚಲಿತದಲ್ಲಿದೆ. ಸೋದೆಮಠ ಇನ್ನಂಜೆಯಲ್ಲಿ ವಿದ್ಯಾ ಸಂಸ್ಥೆಯೊಂದನ್ನು ಸುವ್ಯವಸ್ಥಿತವಾಗಿ ನಡೆಸಿಕೊಂಡು ಬರುತ್ತಿದೆ.

## ಶ್ರೀ ಶ್ರೀ ವಿಶ್ವೋತ್ತಮತೀರ್ಥರು

ಸೋದೆ ಮಠ ಪರಂಪರೆಯಲ್ಲಿ ೩೫ನೆಯ ಶ್ರೀ ಶ್ರೀ ವಿಶ್ವೋತ್ತಮತೀರ್ಥರು ಈಗಿನ ಪೀಠಾಧಿಪತಿಗಳು. ಅವರ ಶುಭ ಜನನ ಶ್ರೀಮುಖನಾಮ ಸಂವತ್ಸರದ ಪುಷ್ಯ ಬಹುಳ ತ್ರಯೋದಶಿ ಶನಿವಾರ ಜ್ಯೇಷ್ಠಾ ನಕ್ಷತ್ರದಲ್ಲಿ (೧೩-೧-೧೯೩೪) ಉಡುಪಿ ಸಮೀಪದ ಉದ್ಯಾವರದಲ್ಲಿ. ಅವರ ಪೂರ್ವಾಶ್ರಮದ ಹೆಸರು ಮಾಧವ. ತಂದೆ ಕೃಷ್ಣಾಚಾರ್ಯರು, ತಾಯಿ ಕೃಷ್ಣವೇಣಿ. ಅವರು ತಮ್ಮ ೯ನೆಯ ವಯಸ್ಸಿನಲ್ಲೇ ೧೯೪೩ ಸ್ವಭಾನು ಸಂವತ್ಸರದ ಭಾದ್ರಪದ ಶುದ್ಧ ಚತುರ್ಥಿಯಂದು ಗುರು ಶ್ರೀ ವಿಶ್ವೇಂದ್ರತೀರ್ಥರಿಂದ ಸನ್ಯಾಸ ದೀಕ್ಷೆ ಸ್ವೀಕರಿಸಿ ಮಠದ ಉತ್ತರಾಧಿಕಾರಿಯೆನಿಸಿಕೊಂಡರು. ಅವರು ನಿರಂತರ ಶಾಸ್ತ್ರಾಧ್ಯಯನ; ಮಾಧ್ವತತ್ವಜ್ಞಾನ ಚಿಂತನೆಗಳಿಂದ ಕನ್ನಡ ಸಂಸ್ಕೃತಗಳಲ್ಲಿ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಶ್ರೀ ಕಾಣಿಯೂರು ಮಠದ ಶ್ರೀ ವಿದ್ಯಾಸಮುದ್ರತೀರ್ಥರಿಂದ ಸುಧಾ ಉದ್ಗ್ರಂಥಗಳ ಶಾಸ್ತ್ರೋಕ್ತ ಅಧ್ಯಯನ ನಡೆಸಿದ್ದಾರೆ. ಭಕ್ತರನ್ನು ಆದರದಿಂದ ಬರಮಾಡಿಕೊಳ್ಳುವ ಅವರು ಕುಶಲ ವಿಚಾರಿಸಿ ನಗುಮೊಗದಿಂದ ಎಲ್ಲರ ಮನಸೂರೆಗೊಳ್ಳುವ ಅವರು ಮಿತಭಾಷಿ. ಸರಳ ನಡೆನುಡಿ; ಮೃದುಸ್ವಭಾವದ ಅವರು ದಿನದ ಬಹುಪಾಲು ಸಮಯವನ್ನು ಜಪ-ತಪ-ಪೂಜೆ ಅಧ್ಯಯನಗಳಿಗೆ ವಿನಿಯೋಗಿಸುವರು.

## ಪರ್ಯಾಯೋತ್ಸವ

೧೯೯೬ ಜನವರಿ ೧೮ ರಂದು ಮುಂಜಾನೆ ೩ ಗಂಟೆಗೆ ಉಡುಪಿ ಜೋಡುಕಟ್ಟೆಯಿಂದ ಅದ್ದೂರಿ ಪರ್ಯಾಯ ಮೆರವಣಿಗೆ ಪ್ರಾರಂಭ. ಮೆರವಣಿಗೆಯಲ್ಲಿ ಆನೆ; ಜೆಂಡೆ; ವಾದ್ಯಮೇಳ; ಸ್ಕೌಟ್-ಗೈಡ್-ಕವಾಯತು; ಸ್ತೋತ್ರ ಪಠಣ; ಶ್ರೀಕೃಷ್ಣ-ಮುಖ್ಯಪ್ರಾಣ- ಮಧ್ವ - ವಾದಿರಾಜರ ಚರಿತ್ರೆಗೆ ಸಂಬಂಧಿಸಿದ ದೃಶ್ಯಾವಳಿಗಳು; ತಟ್ಟಿರಾಯ; ಯಕ್ಷಗಾನ; ಜಾನಪದ ವೇಷಗಳು; ಸುವರ್ಣಪಾಲಕಿಯಲ್ಲಿ ಮಠದ ಪಟ್ಟದ ದೇವರು; ಅಲಂಕೃತ ಮೇನೆಗಳಲ್ಲಿ ಅಷ್ಟಮಠದ ಯತಿಗಳು ಪಾಲ್ಗೊಳ್ಳುತ್ತಾರೆ. ೪.೪೫ರ ಶುಭಮುಹೂರ್ತದಲ್ಲಿ ಪರ್ಯಾಯ ಬಿಟ್ಟೇಳುವ ಶ್ರೀಗಳು ಪರ್ಯಾಯ ಶ್ರೀ ಸೋದೆ ಶ್ರೀಗಳವರನ್ನು ಸತ್ಕರಿಸಿ ಸರ್ವಜ್ಞ ಪೀಠದಲ್ಲಿ ಕುಳ್ಳಿರಿಸುವರು. ರಾಜಾಂಗಣದ ಪರ್ಯಾಯ ದರ್ಬಾರ್ ರಾಜ್ಯ - ಕೇಂದ್ರ ಸಚಿವರು; ಗಣ್ಯಮಹನೀಯರು ಭಾಗವಹಿಸಲಿದ್ದು ವಿದ್ವಾಂಸರು; ದಾನಿಗಳನ್ನು ಪರ್ಯಾಯಪೀಠದಿಂದ ಸನ್ಮಾನಿಸಲಾಗುತ್ತದೆ. ಶ್ರೀ ಶ್ರೀಗಳವರ ಉಪನ್ಯಾಸ; ಮಧ್ಯಾಹ್ನ ಸಂತರ್ಪಣೆ; ರಾತ್ರಿ ಬ್ರಹ್ಮೋತ್ಸವ ಹಾಗೂ ೩ ದಿನಗಳ ಕಾಲ ನೃತ್ಯ - ಸಂಗೀತ - ಭರತನಾಟ್ಯ ಮನರಂಜನಾ ಕಾರ್ಯಕ್ರಮಗಳಿವೆ. ✪

# 1996-ಗ್ರಹಗತಿ

---ವಾಸಿಷ್ಠ.

## ಮೇಷ

ಅಶ್ವಿನಿ ೪, ಭರಣಿ ೪, ಕೃತ್ತಿಕೆ ೧ ನೆಯ ಪಾದ

ಈ ರಾಶಿಯವರಿಗೆ ಗುರುವು ವರ್ಷಾದಿಯಿಂದ ಡಿಸೆಂಬರ್ ೨೫ರ ತನಕ ಧನುರಾಶಿಯಲ್ಲಿರುವುದರಿಂದ ಸುಖಪ್ರಾಪ್ತಿ, ಧನವೃದ್ಧಿ, ಅವಿವಾಹಿತರಿಗೆ ವಿವಾಹಯೋಗ, ಪುತ್ರಪ್ರಾಪ್ತಿ, ಜಾಯಾಸುಖ ಕಾರ್ಯಸಿದ್ಧಿ, ತೀರ್ಥಯಾತ್ರಾಯೋಗ - ಮೊದಲಾದ ಸತ್ಫಲಗಳು ದೊರಕಲಿವೆ. ಉದ್ಯೋಗಸ್ಥರಿಗೆ ಪದೋನ್ನತಿ - ಭಡತಿ, ನಿರುದ್ಯೋಗಿಗಳಿಗೆ ಉದ್ಯೋಗಪ್ರಾಪ್ತಿ ಆಗಲಿದೆ. ಫೆಬ್ರುವರಿ ೧೬ ರಿಂದ ಶನಿಯು ದ್ವಾದಶಸ್ಥಾನಕ್ಕೆ ಬರುವುದರಿಂದ ಏಳೂವರೆ ಶಾಟದ ರುಚಿಯನ್ನು ತೋರಿಸುವನು. ಮನಸ್ಸಿಗೆ ಕಿರಿಕಿರಿ, ಭಯ, ಅನಾರೋಗ್ಯ, ಮಾನಹಾನಿ, ಕೆಲಸಗಳಲ್ಲಿ ಅಡ್ಡಿ ಆತಂಕ. ಹಿಡಿದ ಕೆಲಸದಲ್ಲಿ ಆತಂಕ ಕಂಡುಬಂದರೂ ಗೊತ್ತು ಮಾಡಿಕೊಂಡ ಗುರಿಯನ್ನು ಮುಟ್ಟುತ್ತದೆ. ಶನಿಯು ಕೆಲಸವನ್ನು ಬೇರೊಂದು ದಿಕ್ಕಿನಲ್ಲಿ ಒಯ್ದು ಮನಸ್ಸಿಗೆ ಕಿರಿಕಿರಿಯನ್ನು ಹಣಕಾಸಿನ ತೊಂದರೆಯನ್ನು ಉಂಟುಮಾಡಿದರೂ ಗುರುವುಭಾಗ್ಯದಲ್ಲಿರುವುದರಿಂದ ಕಾರ್ಯಸಿದ್ಧಿ ಮತ್ತು ಇಚ್ಛಿತ ಪ್ರಾಪ್ತಿ ಪಡೆದುಕೊಳ್ಳಬಹುದಾಗಿದೆ. ಶನಿವಾರ ಉಪೋಷಣೆ ಶನಿದೇವರ ಆಂಜನೇಯರ ಪೂಜಾಸೇವೆ, ನೀಲಮಣಿರತ್ನ ಧಾರಣೆ - ದುರ್ಗಾಪೂಜಾರಾಧನೆ ಇತ್ಯಾದಿಗಳಿಂದ ಮಾನಸಿಕ ಸ್ವಾಸ್ಥ್ಯ ಪಡೆದು ಉತ್ತಮ ಫಲಗಳನ್ನು ಪಡೆದುಕೊಳ್ಳಬಹುದು.

## ವೃಷಭ

ಕೃತ್ತಿಕೆ ೨,೩,೪ ರೋಹಿಣಿ ೪, ಮೃಗಶಿರ ೧,೨

ಅಷ್ಟಮಸ್ಥ ಗುರುವು ಈ ರಾಶಿಯವರಿಗೆ ಸ್ವಲ್ಪ ಮಟ್ಟಿಗೆ ಅವರೋಧಗಳನ್ನುಂಟುಮಾಡಿದರೂ ತನ್ನದೇ ಮನೆಯಲ್ಲಿ ಇರುವುದರಿಂದ ಅಷ್ಟೇನೂ ಕೆಡಕು ಮಾಡಲಾರನು. ಶನಿಯು ಫೆಬ್ರವರಿ ೧೬ ರಿಂದ ಲಾಭಸ್ಥಾನವನ್ನು ಅಲಂಕರಿಸಿದ್ದರಿಂದ ಲಾಭವನ್ನು ಮಾಡಿಕೊಟ್ಟು ದ್ರವ್ಯಲೋಭವನ್ನುಂಟುಮಾಡಿ ಮಾನಸಿಕ ಸ್ವಾಸ್ಥ್ಯ ದೂರಮಾಡುವನು. ರಾಹುವು ಪಂಚಮ ಸ್ಥಾನದಲ್ಲಿರುವುದರಿಂದ ಸಂತತಿನಾಶ, ದುಃಖ, ಹಣದ ನಾಶ - ಉಂಟುಮಾಡುವನು. ಕೇತುವು ಏಕಾದಶ ಸ್ಥಾನಕ್ಕೆ ಇರುವುದರಿಂದ ಕೀರ್ತಿ ಮತ್ತು ಧನಯೋಗ ಲಾಭವಿದೆ. ಮೇ ಉತ್ತರಾರ್ಧದಿಂದ ಜೂನ್ ಪೂರ್ವಾರ್ಧದಲ್ಲಿ ಕೈಗೂಡದ ಅನೇಕ ಕೆಲಸಗಳು ಪೂರ್ತಿಯಾಗುವವು. ವಿದ್ಯಾರ್ಥಿಗಳಿಗೆ ಬಹುಯತ್ನದಿಂದ ಯಶಲಾಭವಿದೆ. ನಿರುದ್ಯೋಗಿಗಳಿಗೆ ಸಾಮಾನ್ಯ ದರ್ಜೆಯ ಉದ್ಯೋಗ ದೊರಕುವುದು. ಹಳೆಯ ಸಾಲಗಳು ವ್ಯವಹಾರಸ್ಥರಿಗೆ ಬಾಧಿಸುವ ಸಾಧ್ಯತೆಯಿದೆ. ವರ್ಷದ ಕೊನೆಗೆ ಅವಿವಾಹಿತರಿಗೆ ಬಾಸಿಂಗಬಲದ ಯೋಗವು ಕಂಡುಬರುತ್ತದೆ. ವರ್ಷದ ಕೊನೆಗೆ ಅನೇಕ ಕೆಲಸಗಳು ಪೂರ್ತಿಗೊಳ್ಳುತ್ತ ಆನಂದಮಯ ವಾತಾವರಣ ನೆಲೆಸುವುದು. ಗುರುವಾರ ಉಪೋಷಣೆ ಶೈವಾರಾಧನೆಯಿಂದ ಸಂಕಷ್ಟಗಳು ಪರಿಹಾರವಾಗುವುದು. ಶ್ರೀಸೂಕ್ತಾರಾಧನೆಯಿಂದ ಆರ್ಥಿಕ ಉನ್ನತಿ ಆಗುವುದು. ಕುಲದೇವತಾ ಉಪಾಸನೆಗೈದರೆ ಸಕಲ ಇಷ್ಟಾರ್ಥಗಳು ಪೂರ್ತಿಯಾಗುವವು.

## ಮಿಥುನ

ಮೃಗಶಿರಾ ೩-೪, ಆರ್ದ್ರಾ ೪, ಪುನರ್ವಸು ೧,೨,೩

ಈ ವರ್ಷ ಈ ರಾಶಿಯವರಿಗೆ ಬಹು ಉತ್ತಮದಾಯಕ. ಸಪ್ತಮಸ್ಥ ಗುರುವು ಎಲ್ಲ ಕೆಲಸಗಳನ್ನು ಉತ್ತಮರೀತಿಯಿಂದ ಸಾಗಿಸಿ ಕುಟುಂಬಿಕ ಸೌಖ್ಯ ನೀಡುವನು. ಶನಿಯು ನವಮದಲ್ಲಿ ಕೇತುವು ದಶಮದಲ್ಲಿದ್ದುಕೊಂಡು ಚಿಂತೆ ಶೋಕ ನೀಡುವರು. ಸುಖಸ್ಥಾನದ ರಾಹು ವೈರತ್ವವನ್ನು ಉಂಟುಮಾಡುವನು. ವಿದ್ಯಾರ್ಥಿಗಳಿಗೆ ಆರಂಭದಿಂದ ಅನುಕೂಲ. ನಿರುದ್ಯೋಗಿಗಳಿಗೆ ಮಾರ್ಚ್‌ದಲ್ಲಿ ಕೆಲಸ ಪ್ರಾಪ್ತಿ ವರ್ಷದ ಉತ್ತರಾರ್ಧದಲ್ಲಿ ಆರ್ಥಿಕ ಪ್ರಗತಿ. ಹಲವರಿಂದ ಹಣದ ಸಹಾಯ ಸಹಕಾರ ಲಭಿಸಲಿದೆ. ಪುಣ್ಯಕ್ಷೇತ್ರ ಸಂದರ್ಶನ ಮಹಾತ್ಮರ ದರ್ಶನಭಾಗ್ಯವಾಗಿ ಶ್ರವಣಲಾಭದಿಂದ ಮನಸ್ಸಿಗೆ ಪ್ರಸನ್ನತೆ ಲಭಿಸುವುದು. ಮಹಿಳೆಯರಿಗೆ ಆಶಾದಾಯಕ ಬೆಳವಣಿಗೆ ಈ ವರ್ಷ ಕಂಡುಬರುತ್ತದೆ. ವೈವಾಹಿಕ ಕಾರ್ಯಗಳಿಗೆ ಅನುಕೂಲವಾತಾವರಣ ಈ ವರ್ಷ ಕೂಡಿಬರುತ್ತದೆ. ಪರಿಶ್ರಮ ಸಹಿತ ಸತತ ಶ್ರದ್ಧೆಯಿಂದ ಯಶಸ್ಸು ಈ ರಾಶಿಯವರಿಗೆ ದೊರಕುತ್ತದೆ. ಈ ರಾಶಿಯವರಿಗೆ ವರ್ಷವಿಡೀ ಸುದೃಢವಾದ ಆರೋಗ್ಯ ಭಾಗ್ಯವಿದೆ. ಗ್ರಹಪೂಜಾರಾಧನೆ' ಗಣಪತ್ಯುಪಾಸನೆ ಮತ್ತು ಕುಲದೇವತಾ ಪೂಜಾಸೇವೆಗಳು ಕಷ್ಟಗಳನ್ನು ಪಾರುಮಾಡಿ ವೃತ್ತಿ ಉದ್ಯೋಗ ಶಿಕ್ಷಣದಲ್ಲಿ ಪ್ರಗತಿಯನ್ನುಂಟುಮಾಡುವುವು.

## ಕರ್ಕಾಟಿಕ

ಪುನರ್ವಸು ೪ನೆಯ ಪಾದ ಪುಷ್ಯ ೪, ಆಶ್ಲೇಷಾ ೪

ಈ ರಾಶಿಯವರಿಗೆ ಗುರುವು ೬ನೆಯ ಸ್ಥಾನದಲ್ಲಿ ಸ್ವಕ್ಷೇತ್ರಗತನಾಗಿರುವುದರಿಂದ ತಾನು ನೀಡುವ ಶೋಕದ ಫಲಗಳಲ್ಲಿ ತುಸು ವಿನಾಯತಿ ತೋರಿಸುವವನಲ್ಲದೇ ಕರ್ಮಸ್ಥಾನವನ್ನು ತ್ರಿಪಾದ ದೃಷ್ಟಿಯಿಂದ ನೋಡುವುದರಿಂದ ಈ ರಾಶಿಯವರು ನಡೆಸುವ ಭಗವತ್ ಆರಾಧನೆಯಿಂದ ಉತ್ತಮ ಫಲಗಳನ್ನು ಪಡೆಯಲು ಶಕ್ಯವಿದೆ. ಸ್ವಂತ ಉದ್ಯೋಗಗಳು ವ್ಯಾಪಾರ ವ್ಯವಹಾರಾದಿಗಳು ತೀರ ಮಂದಗತಿಯಿಂದ ಸಾಗಿದರೂ ಕೂಡ ಡಿಸೆಂಬರದಲ್ಲಿ ಒಂದು ನಿಶ್ಚಿತವಾದ ಗೆಲುವಿನ ಹಂತಕ್ಕೆ ಮುಟ್ಟಬಹುದಾಗಿದೆ. ಮಧ್ಯ ಮಧ್ಯದಲ್ಲಿ ವಿಜಯದ ಚಿಹ್ನೆಗಳು ಆಗಾಗ ಕಾಣುತ್ತಿದ್ದು ತುಸುಪ್ರಮಾಣದ ಲಾಭ ದೊರಕಲಿದೆ. ಹೊಸವಾಗಿ ಕೆಲಸ ವ್ಯವಹಾರ ಆರಂಭಿಸಲು ಈ ವರ್ಷದಲ್ಲಿ ಅಷ್ಟೇನೂ ಒಳಿತೆಂಬುದು ಕಾಣುತ್ತಿಲ್ಲ ಮಹಿಳೆಯರಿಗೆ ಈ ವರ್ಷ ಮಿಶ್ರಫಲ. ವಿದ್ಯಾರ್ಥಿಗಳಿಗೆ ಪಠ್ಯೇತರ ಚಟುವಟಿಕೆಗಳಲ್ಲಿ ಹೆಚ್ಚಿಗಿನ ಆಸಕ್ತಿ. ಕಷ್ಟಪಟ್ಟು ಓದುಬರಹ ನಡೆಸಿದರೆ ಉತ್ತಮ ಫಲಿತಾಂಶ ಸಾಧ್ಯ. ಗುರುವಾರ ಉಪೋಷಣೆ, ಗ್ರಹಪೂಜೆ, ದುರ್ಗಾದೇವಿಯ ಆರಾಧನೆಗಳು ಅಗತ್ಯವಿದ್ದು ಇವುಗಳು ಅನೇಕ ಸಮಸ್ಯೆಗಳಿಗೆ ಪರಿಹಾರವನ್ನು ಸೂಚಿಸುತ್ತದೆ. ಈ ವರ್ಷದ ಕೊನೆಗೆ ಆನಂದಮಯ ಘಟನೆಯು ಸಂಭವಿಸಲಿದೆ.

## ಸಿಂಹ

ಮಘಾ ೪, ಪೂರ್ವಾ ೪, ಉತ್ತರಾ ೧ ನೆಯಪಾದ

ಈ ರಾಶಿಯವರಿಗೆ ವರ್ಷವಿಡೀ ಗುರುವು ಪಂಚಮಕ್ಕೆ ಆರಂಭದಲ್ಲಿ ಸಪ್ತಮಕ್ಕೆ. ಶನಿಯು ನಂತರ ಫೆಬ್ರುವರಿ ೧೬ ರಿಂದ ಆಯುಷ್ಯ ಸ್ಥಾನಕ್ಕೆ ದ್ವಿತೀಯಕ್ಕೆ ರಾಹು ಅಷ್ಟಮಕ್ಕೆ ಕೇತು - ಈ ರೀತಿ ಗ್ರಹಸ್ಥಿತಿಯಿರುತ್ತದೆ. ಗುರು ಪಂಚಮಕ್ಕೆ ಮತ್ತು ದ್ವಿತೀಯಕ್ಕೆ ರಾಹು ಇವರುಗಳು ಆರ್ಥಿಕಸ್ಥಿತಿಗತಿಗಳನ್ನು ಉತ್ತಮಪಡಿಸುವಲ್ಲಿ ಸಹಕಾರಿ, ಡಿಸೆಂಬರದಲ್ಲಿ ಕಂಕಣಬಲ. ನಿರುದ್ಯೋಗಿಗಳಿಗೆ ಕೆಲಸಪ್ರಾಪ್ತಿ. ಆರಂಭದಲ್ಲಿ ವ್ಯವಹಾರದೊಳಗೆ ತುಸು ತೊಂದರೆ ಆ ಮೇಲೆ ಅಷ್ಟಮ

ಸ್ಥಿತ ಶನಿಯಿಂದ ಉದ್ಯೋಗದಲ್ಲಿ ವ್ಯವಹಾರದಲ್ಲಿ ಏರು ಪೇರು. ಆದರೂ ಕೂಡ ತುಂಬ ಹೆಣಗಾಡಿ ಸಮಸ್ಥಿತಿಯನ್ನು ಕಾದುಕೊಂಡು ಹೋಗುವಲ್ಲಿ ಈ ರಾಶಿಯವರು ಯಶಸ್ವಿಯಾಗುತ್ತಾರೆ. ಪುಣ್ಯಕ್ಷೇತ್ರ ಯಾತ್ರೆ ಕುಲದೇವತಾ ದರ್ಶನ ಭಾಗ್ಯಗಳಿಂದ ಇನ್ನು ಗುರು ಮಹಾತ್ಮರ ಉಪದೇಶವಾಣಿ ಲಾಭ ಈ ರಾಶಿಯವರಿಗೆ ಲಭಿಸಿ ಮನಸ್ಸಿನ ಮೇಲೆ ಪರಿಣಾಮ ವುಂಟು ಮಾಡಿ ಶಾಂತಿ ದೊರಕುವುದು. ಮಹಿಳೆಯರಿಗೆ ಈ ವರ್ಷ ಉತ್ತಮ. ನಿರಂತರ ಪತಿಪ್ರೇಮಕ್ಕಾಗಿ ಸೌಮಂಗಲ್ಯ ವೃದ್ಧಿಗಾಗಿ ದೇವಿ ಆರಾಧನೆ ಅಗತ್ಯ ಶನಿವಾರ ಮಾರುತಿದರ್ಶನ ಮಾಡಿಸಬೇಕಲ್ಲದೇ ಶ್ರಾವಣದ ಶನಿವಾರಗಳಲ್ಲಿ ಶನಿಜಪ ಮಾಡಿಸಿ ವಿಧಿಯುಕ್ತವಾಗಿ ಕಬ್ಬಿಣದ ಉಂಗುರ ಧರಿಸಿ ಉದ್ದು ಧಾನ್ಯವನ್ನು ದಾನ ಕೊಡಬೇಕು. ಶಿವಾಲಯದಲ್ಲಿ ಪೂಜಾ ಅಭಿಷೇಕ ಸೇವೆಯಿಂದ ಅನೇಕ ತೊಂದರೆ ತೊಡಕುಗಳು ನಿವಾರಣೆಗೊಳ್ಳಬಹುದು.

### ಕನ್ಯಾ

ಉತ್ತರಾ ೨-೩-೪, ಹಸ್ತಾ ೪, ಚಿತ್ತಾ ೧-೨

ಈ ರಾಶಿಯವರಿಗೆ ಚತುರ್ಥಕ್ಕೆ ಗುರು ಜನ್ಮಕ್ಕೆ ರಾಹು ಕೇತು ಸಪ್ತಮಕ್ಕೆ ಫೆಬ್ರವರಿ ೧೬ ತನಕ, ಷಷ್ಠಕ್ಕೆ ಶನಿ ಆಮೇಲೆ ಸಪ್ತಮಕ್ಕೆ ಶನಿ ಬರುವರು. ಈ ವರ್ಷ ಗುರುಬಲವಿಲ್ಲದಿದ್ದರೂ ತನ್ನ ಮನೆಯಲ್ಲಿರುವುದರಿಂದ ತುಸು ಮಟ್ಟಿಗೆ ಶುಭ ಕೃಪೆ ಬೀರುವನು. ಶನಿಯು ೬ ನೆಯ ಸ್ಥಾನದಲ್ಲಿರುವಾಗ ಸಾಹಸದ ಕೆಲಸಗಳಲ್ಲಿ ತೊಡಗಿಸಿಕೊಂಡರೂ ಬಹು ಎಚ್ಚರಿಕೆಯಿಂದ ಕಾರ್ಯ ನಿರ್ವಹಿಸಬೇಕಾಗುತ್ತದೆ. ಫೆಬ್ರವರಿ ಆದಿಯಲ್ಲಿ ಬಾಸಿಂಗಬಲದ ಶುಭಯೋಗ ಕಂಡುಬರುತ್ತದೆ. ಸಪ್ತಮಸ್ಥ ಶನಿಯು ಅನೇಕ ಚಿಕ್ಕಪುಟ್ಟ ಕಾರಣಗಳಿಂದ ಮನಸ್ಸಿಗೆ ಕಿರಿಕಿರಿಯನ್ನುಂಟುಮಾಡುವನು. ಆಗ ತಾಟಸ್ಥ ನೀತಿ ಅವಶ್ಯ ಪ್ರಯಾಣದಿಂದ ಹಣವ್ಯಯವೆಚ್ಚದಾಯಕ. ವಿದ್ಯಾರ್ಥಿಗಳು ತುಂಬಾ ಪರಿಶ್ರಮ ಹಾಗೂ ನಿಯಮಿತವಾಗಿ ಅಧ್ಯಯನ ಗೈಯಬೇಕು. ಮನೋರಂಜನೆ ಕಡಿಮೆಮಾಡಿ ಓದುಬರಹದಲ್ಲಿ ತೊಡಗಿದರೆ ಯಶವು ಖಂಡಿತ. ಡಿಸೆಂಬರ್ ಕೊನೆಗೆ ಹೊಸತು ಹಾಗೂ ಉತ್ತಮ ಕೆಲಸ ಸಿಗುವ ಅವಕಾಶ. ಆಗಲೇ ಅನೇಕ ಕೆಲಸಗಳು ಕೈಗೂಡುವ ಸಾಧ್ಯತೆ ಕುಲದೇವರ ದರ್ಶನ ಪೂಜನಾದಿಗಳಿಂದ ಕೆಲಸಗಳು ಸುಗಮವಾಗಿ ಸಾಗುತ್ತವೆ. ದುರ್ಗಾರಾಧನೆ ಗೈದರೆ ಮನೋಭೀಷ್ಟ ಕಾರ್ಯಗಳು ಸಿದ್ಧಿಸುತ್ತವೆ. ಸಂಕಟ ಹರಣಕ್ಕಾಗಿ ಗಣಪತ್ಯಾರಾಧನೆ ಅವಶ್ಯ

### ತುಲಾ

ಚಿತ್ತಾ ೨-೪, ಸ್ವಾತಿ ೪, ವಿಶಾಖಾ ೧-೨-೩

ಕಳೆದ ವರ್ಷದಿಂದ ನಡೆದು ಹೋದ ದಾರಿಯಲ್ಲಿ ಈ ರಾಶಿಯವರು ಸಾಗಿದರೆ ಅವರಿಗೆ ಅನುಕೂಲ. ತೃತೀಯಕ್ಕೆ ಗುರು, ಶನಿಯು ಫೆಬ್ರುವರಿ ೧೬ ತನಕ ಪಂಚಮಕ್ಕೆ ಆಮೇಲೆ ೬ನೆಯ ಸ್ಥಾನಕ್ಕೆ ರಾಹು - ಕೇತುಗಳು ೧೨ ಮತ್ತು ೬ ನೆಯ ಸ್ಥಾನಗಳಲ್ಲಿ ಕ್ರಮವಾಗಿ ಇರುವರು. ಫೆಬ್ರುವರಿಯಲ್ಲಿ ಶನಿಯ ರಾಶಿಯ ಬದಲಾವಣೆ ಕೆಲಸದ ಮೇಲೆ ಪರಿಣಾಮ ಬೀರುತ್ತದೆ. ತುಂಬಾ ಕಷ್ಟಪಟ್ಟು ಕೆಲಸ ಮಾಡಿದರೆ ಧನಾಗಮನದ ಸಾಧ್ಯತೆ. ಸಾಲದಿಂದ ಬಿಡುಗಡೆ, ತುಸು ಮಟ್ಟಿಗೆ ಆರ್ಥಿಕ ಲಾಭ. ಸಾಹಸಿಕ ಕೆಲಸದಲ್ಲಿ ಕೊಂಚ ಯಶಸ್ಸು. ವಿದ್ಯಾರ್ಥಿಗಳು ಅಭ್ಯಾಸದಲ್ಲಿ ತಲ್ಲೀನರಾಗಲು ಗಣಪತಿಗೆ ದೂರ್ವಾರ್ಪಣದಿಂದ ಉತ್ತಮ ಫಲಿತಾಂಶ ಸಾಧ್ಯ. ಕುಲದೇವತಾ ದರ್ಶನ ಭಾಗ್ಯ ಇದೆ. ಮಹಾತ್ಮರ ಗುರುಹಿರಿಯರ ಅಖಂಡ ಆಶೀರ್ವಾದ ಬಲದಿಂದ ಬದುಕನ್ನು ಎತ್ತರಕ್ಕೇರಿಸಿಕೊಳ್ಳಬಹುದು. ರಾಹುಜಪ, ದೇವ್ಯಾರಾಧನೆಯಿಂದ ಶತ್ರುಭಯ ಮಾನಸಿಕ ಕಿರಿಕಿರಿಗಳು ದೂರವಾಗುವವು. ಶ್ರೀಸೂಕ್ತದ ಆರಾಧನೆಯಿಂದ ಹಣಕಾಸಿನ ವಿಷಯದಲ್ಲಿ ತೊಂದರೆ ನಿವಾರಣೆಗೊಂಡು ಉತ್ತಮ ಫಲ ಪಡೆದುಕೊಳ್ಳಬಹುದು.

### ವೃಶ್ಚಿಕ

ವಿಶಾಖಾ ೪ನೇ ಪಾದ, ಅನೂರಾಧಾ ೪, ಜ್ಯೇಷ್ಠಾ ೪

ದ್ವಿತೀಯಕ್ಕೆ ಗುರುವು ಮತ್ತು ಲಾಭದಲ್ಲಿ ರಾಹು ಈ ಗ್ರಹಗಳು ಈ ರಾಶಿಯವರಿಗೆ ಉತ್ತಮ ಕೀರ್ತಿ

# ವಾಚಕರಲ್ಲಿ.....

ಏರುತ್ತಿರುವ ಎಲ್ಲಾ ರೀತಿಯ ವಸ್ತುಗಳ ಬೆಲೆಗಳ ನಡುವೆ "ಸಪ್ತಗಿರಿ"ಯ ಉತ್ಪಾದನಾ ವೆಚ್ಚವೂ ಏರುತ್ತಿದೆಯಾಗಿ, ತಿ.ತಿ.ದೇ. ಧರ್ಮಕರ್ತರ ಮಂಡಳಿಯ ನಿರ್ಣಯದ ಪ್ರಕಾರ ಏಪ್ರಿಲ್ 1996 ರಿಂದ ಸಪ್ತಗಿರಿಯ ಬೆಲೆಯನ್ನು ನಾಲ್ಕು ರೂಪಾಯಿಗಳಿಗೆ ಏರಿಸಲು ತೀರ್ಮಾನಿಸಲಾಗಿದೆ.

1996 ಏಪ್ರಿಲ್ ತಿಂಗಳಿನಿಂದ ವಾರ್ಷಿಕ ಚಂದಾ ರೂ. 48/- ಆಗಿರುತ್ತದೆ. ವಾರ್ಷಿಕ ಚಂದಾಹಣ ತುಂಬುವವರು ಈ ಹೊಸ ಬೆಲೆಯನ್ನು ಗಮನಿಸಿ ತುಂಬಬೇಕೆಂದು ವಿನಂತಿ.

ಈಗಾಗಲೇ ಚಂದಾದಾರರಾಗಿರುವ ಸದಸ್ಯರ ಉಳಿಕೆ ಹಣವನ್ನು ಹೊಸಬೆಲೆಗೆ ತಕ್ಕಂತೆ ಹೊಂದಿಸಲಾಗುವುದಾಗಿ, ಅವರುಗಳು ತಮ್ಮ ಚಂದಾ ಅವಧಿಯನ್ನು ಸರಿನೋಡಿಕೊಂಡು ಪುನರುದ್ಧರಿಸಬೇಕೆಂದು ವಿನಂತಿ.

ಏಜಂಟರುಗಳು ಏಪ್ರಿಲ್ 1996 ರಿಂದ ತಮ್ಮ ಠೇವಣಿಯನ್ನು ಪ್ರತಿಗಳಿಗೆ ತಕ್ಕಂತೆ ಹೆಚ್ಚಿಸಬೇಕಾಗಿ ವಿನಂತಿ.

## ಸಪ್ತಗಿರಿ

**ಬಿಡಿಪ್ರತಿ - ರೂ. 4/-** **ವಾರ್ಷಿಕ ಚಂದಾ - ರೂ. 48/-**

**(1996 ಏಪ್ರಿಲ್ ಸಂಚಿಕೆಯಿಂದ)**

ಓದುಗರು, ಏಜಂಟರು ಹೊಸ ಬೆಲೆಗೆ ಹೊಂದಿಕೊಂಡು ಸಹಕರಿಸಬೇಕಾಗಿ ವಿನಂತಿ.

**ಸಂಪಾದಕರು, ಸಪ್ತಗಿರಿ.**

ಹಾಗೂ ಹಣವನ್ನು ತಂದುಕೊಡುವ ಸಾಧ್ಯತೆಯಿದೆ. ಯಾವುದೇ ಕೆಲಸದಲ್ಲಿ ಕೈಹಾಕಿದರೂ ಹೇರಳ ಧನ ಲಾಭ ಆರ್ಥಿಕ ರಂಗದಲ್ಲಿ ಅನೇಕ ಕ್ಲಿಷ್ಟತರ ಸಮಸ್ಯೆಗಳ ನಿವಾರಣೆ, ಕಳೆದ ವರ್ಷದ ತನಕ ಆರೋಗ್ಯದಲ್ಲಿ ಕೆಡಕು ಮಾಡಿದ ಶನಿಯು ಹಣಕಾಸಿನಲ್ಲಿ ಹಾನಿಮಾಡುವನು. ಮನಸ್ಸಿನ ಶಾಂತತೆಯನ್ನು ಹೋಗಲಾಡಿಸಿ ವಿನಾಕಾರಣ ಹಣದ ಅಪವ್ಯಯವಾಗಲು ಪಂಚಮ ಶನಿಯು ಕಾರಣಭೂತನಾಗುವನು. ವಿದ್ಯಾರ್ಥಿಗಳು ಚಿತ್ತ ಚಾಂಚಲ್ಯತೆಗೆ ಒಳಗಾಗದೆ ಓದು ಬರಹದಲ್ಲಿ ತಲ್ಲೀನರಾದರೆ ವಿಶೇಷ ತರಹದ ಯಶಸ್ಸು ಸಿಗುವುದು. ಅವಿವಾಹಿತರಿಗೆ ವಿವಾಹ ಯೋಗ, ಉತ್ತಮ ಆರೋಗ್ಯ ತೀರ್ಥಯಾತ್ರೆಯಿಂದ ನೆಮ್ಮದಿ, ಧಾರ್ಮಿಕ ಕೆಲಸಗಳು ಈ ರಾಶಿಯವರಿಂದ ಆಗುತ್ತಿರುವುದರಿಂದ ಸತ್ಫಲ ಲಭಿಸುತ್ತದೆ. ಮಂತ್ರಿಸಿದ ಕಬ್ಬಿಣದ ಉಂಗುರ ಧಾರಣೆ ಶನಿವಾರ ಉಪೋಷಣೆ ಆಂಜನೇಯನ ದರ್ಶನ ಪೂಜನಾದಿ ಸೇವೆಯು ಅಗತ್ಯವಾಗಿದೆ. ಶೈವಾರಾಧನೆ ಹಾಗೂ ಗೃಹಪೂಜನಾದಿಗಳಿಂದ ಎಲ್ಲ ತೊಂದರೆಗಳು ನಿವಾರಣೆಗೊಂಡು ಉಲ್ಲಾಸ ಉತ್ಸಾಹಗಳಿಂದ ಕೆಲಸ ಮಾಡಲು ಸಾಧ್ಯ.

## ಧನು

ಮೂಲಾ ೪, ಪೂರ್ವಾಷಾಢಾ ೪, ಉತ್ತರಾಷಾಢಾ ೧

ಈ ರಾಶಿಯವರಿಗೆ ಜನ್ಮಸ್ಥ ಗುರು, ಫೆಬ್ರವರಿ ೧೬ ತನಕ ಏಳನೆಯ ಸ್ಥಾನಕ್ಕೆ ಶನಿ, ಅನಂತರ ಚತುರ್ಥ. ದಶಮಕ್ಕೆ ರಾಹು ಚತುರ್ಥಕ್ಕೆ ಕೇತು, ಈ ರೀತಿ ಇದ್ದು ತಮ್ಮ ತಮ್ಮ ಪ್ರಭಾವ ಬೀರುವರು. ವರ್ಷದ ಪೂರ್ವಾರ್ಧದಲ್ಲಿ ವಿಶೇಷ ಶುಭಫಲಗಳ ಸೂಚನೆ ಕಂಡುಬರಬಹುದಾಗಿದೆ. ಕಳೆದ ವರ್ಷದಲ್ಲಿ ನಿರಾಶೆಯ ಅಂಚಿನಲ್ಲಿದ್ದ ಈ ರಾಶಿಯವರಿಗೆ ಈ ವರ್ಷವು ಬೆಳಕಿನ ಕಿರಣ ತೋರಿಸಿದಂತಾಗಿದೆ. ವಿದ್ಯಾರ್ಥಿಗಳು ಓದುಬರಹದಲ್ಲಿ ಹೆಚ್ಚಿಗಿನ ಲಕ್ಷ್ಯ ಹರಿಸಿ ಉತ್ತಮ ಶ್ರೇಯಸ್ಸು ಪಡೆಯಲು ಗಣಪತ್ಯಾರಾಧನೆಯು ಅವಶ್ಯ. ನಿರುದ್ಯೋಗಿಗಳಿಗೆ ಉದ್ಯೋಗಲಾಭ. ಉದ್ಯೋಗ ವ್ಯವಹಾರ ನೌಕರಿಗಳಲ್ಲಿ ಆಕಸ್ಮಿಕ ಕಿಂಚಿತ್ ಧನಲಾಭ. ಸರಕಾರ ಹಾಗೂ ಸಂಸ್ಥೆಗಳಿಂದ ಆರ್ಥಿಕ ನೆರವು. ಆರೋಗ್ಯ ಸ್ಥಿತಿ ಉತ್ತಮ, ಮಹಿಳೆಯರಿಗೆ ಈ ವರ್ಷ ಸಮಾಧಾನಕಾರಕ. ಅವಿವಾಹಿತರಿಗೆ ಬಹು ಪರಿಶ್ರಮದಿಂದ ವಿವಾಹಯೋಗ. ಅನೇಕ ಕೆಲಸಗಳ ಒತ್ತಡದಲ್ಲಿ ಒಮ್ಮೊಮ್ಮೆ ಮಾನಸಿಕ ಸ್ಥಿಮಿತ ಕಳೆದುಕೊಳ್ಳಬಹುದು. ಆಗ ದೃಢ ನಿರ್ಧಾರ ಅತ್ಯಾವಶ್ಯ. ಕುಲದೇವತಾದರ್ಶನ ಶೈವಾರಾಧನೆ ಗೃಹಪೂಜಾ ಪುರಸ್ಕಾರಗಳಿಂದ ಈಪ್ಸಿತ ಕಾರ್ಯಗಳು ಪೂರ್ತಿಯಾಗಲಿರುವುದು.

## ಮಕರ

ಉತ್ತರಾಷಾಢಾ ೨-೩-೪, ಶ್ರವಣ ೪, ಧನಿಷ್ಠಾ ೧-೨

ದ್ವಾದಶಕ್ಕೆ ಗುರು ನವಮಕ್ಕೆ ರಾಹು ತೃತೀಯಕ್ಕೆ ಕೇತು, ಫೆಬ್ರವರಿ ೧೬ರ ಪರ್ಯಂತ ಶನಿಯು ದ್ವಿತೀಯ, ಅನಂತರ ತೃತೀಯಕ್ಕೆ - ಈ ರೀತಿ ಇರುವರು. ದ್ವಾದಶಕ್ಕೆ ಗುರು ಇರುವುದರಿಂದ ಸ್ವಲ್ಪ ಮಟ್ಟಿಗೆ ಪೀಡೆ ಕೊಡಬಹುದಾಗಿದೆ. ಕೆಲಸದಲ್ಲಿ ಅನಪೇಕ್ಷಿತ ತೊಂದರೆಗಳು ವೆಚ್ಚದಾಯಕ ಸಂಗತಿಗಳು ಉಂಟಾಗಿ ಮಾನಸಿಕ ಧೈರ್ಯ ಕಳೆದುಕೊಳ್ಳಬಹುದಾಗಿದೆ. ಏಳೂವರೆ ಶನಿಕಾಟವು ಫೆಬ್ರವರಿ ೧೬ಕ್ಕೆ ಕೊನೆಗೊಳ್ಳುತ್ತದೆ. ಆಮೇಲೆ ಸಾಹಸದ ಕೆಲಸಗಳಲ್ಲಿ ಹೆಚ್ಚಿಗಿನ ಆಸಕ್ತಿಯಿರುವುದರಿಂದ ಅಂಥ ಕೆಲಸಗಳಲ್ಲಿ ತುಂಬ ಪರಿಶ್ರಮದಿಂದ ಫಲವು ದೊರಕಬಹುದಾಗಿದೆ. ಸ್ವತಂತ್ರ ಉದ್ಯಮಿಗಳಿಗೆ ವ್ಯವಹಾರಸ್ಥರಿಗೆ ಅನುಕೂಲಕರವೆನಿಸಿದರೂ ತೊಂದರೆಗಳು ಹಠಾತ್ತನೇ ಬಂದು ಬಾಧಿಸುವ ಸಾಧ್ಯತೆಯಿದೆ. ತುಂಬಾ ವಿಚಾರ ವಿನಿಮಯ ಮಾಡಿ ಕೆಲಸವನ್ನು ಆರಂಭಿಸಿದರೆ ಉತ್ತಮ. ನಿರುದ್ಯೋಗಿಗಳಿಗೆ ಸಾಧಾರಣ ದರ್ಜೆಯ ಉದ್ಯೋಗ ದೊರಕಿದರೂ ಅದೆಂದೂ ಶಾಶ್ವತವಾಗಿರಲಾರದು. ವಿದ್ಯಾರ್ಥಿಗಳು ಓದಿನದಕ್ಕಿಂತ ಹೊರಗಿನ ಸಂಗತಿಗಳಲ್ಲಿ ಮನೋರಂಜನೆಯಲ್ಲಿ ಅತೀವ ಆಸಕ್ತಿ ಹೀಗಾಗಿ ಅಭ್ಯಾಸ ಕುಂಠಿತವಾಗಿ ಸಾಗುವುದು. ಅಧ್ಯಯನಕ್ಕೆ ಅನೇಕ ತೊಂದರೆಗಳು ಎದುರಾಗುವುವು. ಇದರಿಂದ ಪಾರಾಗಲು ಗಣಪತಿಯ ಮತ್ತು ಸರಸ್ವತಿಯ ಉಪಾಸನೆಯು ಅವಶ್ಯ. ಅವಿವಾಹಿತರಿಗೆ ವರ್ಷಾಂತ್ಯದಲ್ಲಿ ಕಂಕಣ ಬಲದ ಯೋಗ. ಹಳದಿ ಹೂಗಳಿಂದ ಗುರುಗ್ರಹದ ಅರ್ಚನೆಯಿಂದ ಕೆಲಸಗಳಲ್ಲಿ ತೊಂದರೆ ನಿವಾರಣೆ, ಮೃತ್ಯುಂಜಯ ಮತ್ತು ಶೈವಾರಾಧನೆಯಿಂದ ದೈಹಿತ ಮಾನಸಿಕ ತೊಂದರೆಗಳು ನಿವಾರಣೆಗೊಂಡು ಕೆಲಸ ಮಾಡುವಾಗ ಹೊಸ ಹುಮ್ಮಸ್ಸು ಲಭಿಸುತ್ತದೆ.

## ಕುಂಭ

ಧನಿಷ್ಠಾ ೩-೪, ಶತತಾರಕಾ ೪,

ಪೂರ್ವಾಭಾದ್ರ ೧, ೨, ೩

ಏಕಾದಶಸ್ಥಿತ ಗುರು, ಅಷ್ಟಮಕ್ಕೆ ರಾಹು, ತೃತೀಯಕ್ಕೆ ಕೇತು, ಫೆಬ್ರವರಿ ೧೬ ಪರ್ಯಂತ ಜನ್ಮಸ್ಥ ಶನಿಯು ನಂತರದಲ್ಲಿ ದ್ವಿತೀಯಕ್ಕೆ ಶನಿ ಇರುವರು. ಲಾಭಸ್ಥಾನಸ್ಥಿತ ಗುರುವು ಕೆಲಸವನ್ನು ಲಾಭದಾಯಕದಾರಿಯಲ್ಲಿ ಸಾಗಿಸಿ ಸಮೃದ್ಧಿ ಸಂತೃಪ್ತಿ ನೀಡುವನು. ನಿರುದ್ಯೋಗಿಗಳಿಗೆ ಶೀಘ್ರ ಉದ್ಯೋಗಪ್ರಾಪ್ತಿ ಮಾರ್ಚ್‌ನಿಂದ ಉದ್ಯೋಗ ವ್ಯವಹಾರದಲ್ಲಿ ಆಕಸ್ಮಿಕವಾಗಿ ತೊಂದರೆ ಬಂದು ಹಣದ ವ್ಯಯ ಆಗುವ ಸಾಧ್ಯತೆಯಿದೆ. ಆಗಾಗ ಚಿಕ್ಕಪುಟ್ಟ ಕೆಲಸಗಳಿಗೆ ಹಣವು ಹೆಚ್ಚು ಹೆಚ್ಚಾಗಿ ಖರ್ಚಾಗಬಹುದಾಗಿದೆ. ವಿದ್ಯಾರ್ಥಿಗಳು ಚೆನ್ನಾಗಿ ಓದಿ ಉತ್ತಮ ಅಂತಗಳನ್ನು ಗಳಿಸಬಹುದು. ಇದಕ್ಕೆ ಪ್ರಯತ್ನ ದೃಢ ನಿರ್ಧಾರ ಅವಶ್ಯ. ಈ ರಾಶಿಯವರಿಗೆ ಉತ್ತಮ ಆರೋಗ್ಯ ಭಾಗ್ಯವಿದೆ. ಅವಿವಾಹಿತರಿಗೆ ಬಾಸಿಂಗ ಬಲದ ಯೋಗವಿದೆ. ಮಹಿಳೆಯರಿಗೆ ಈ ವರ್ಷ ಉತ್ತಮ ಫಲದಾಯಕ. ಈ ವರ್ಷ ತೀರ್ಥಯಾತ್ರೆಯ ಯೋಗವಿದೆ. ಏಳುವರೆ ಶನಿಯ ಕಾಟದ ಕೊನೆಯ ಅವಧಿಯು ಆರಂಭವಾಗುತ್ತಿದ್ದು ಶನಿವಾರ ಉಪೋಷಣೆ ಆಂಜನೇಯನ ಉಪಾಸನೆಯಿಂದ ಶನಿಕಾಟ ನಿವಾರಣೆ ಸಾಧ್ಯ. ಶೈವಾರಾಧನೆ ದುರ್ಗಾಪೂಜೆಗಳು ತೊಂದರೆಗಳನ್ನು ನಿವಾರಿಸಿ ಬಾಳನ್ನು ಉತ್ತಮವಾಗಿ ರೂಪಿಸಲು ಸಾಧ್ಯ.

## ಮೀನ

(ಪೂರ್ವಾ, ಭಾದ್ರಪದಾ ೪,

ಉತ್ತರಾ, ಭಾದ್ರಪದಾ ೪, ರೇವತಿ ೪)

ಕರ್ಮಸ್ಥಾನದಲ್ಲಿ ರಾಶ್ಯಾಧಿಪ ಗುರುವಿರುವುದರಿಂದ ಉದ್ಯೋಗದಲ್ಲಿ ನಿಶ್ಚಿತ ಗುರಿಯನ್ನು ಪಡೆಯಲು ಸಾಧ್ಯವಿದೆ. ಆರಂಭದಲ್ಲಿ ದ್ವಾದಶಸ್ಥಿತ ಶನಿಯು ಅನೇಕ ತೊಂದರೆಗಳನ್ನು ನೀಡುವುದರಿಂದ ಜೀವನ ನೀರಸ, ಫೆಬ್ರವರಿ ೧೬ ರ ನಂತರ ಸಮಾಧಾನತರ ಸ್ಥಿತಿ ಹೊಂದಬಹುದಾಗಿದೆ. ವ್ಯಾಪಾರ ವ್ಯವಹಾರಸ್ಥರಿಗೆ ಸ್ಥಾನಮಾನ ಸಾಧ್ಯ. ನಿಯಮಿತದ ಅಭ್ಯಾಸದಿಂದ ವಿದ್ಯಾರ್ಥಿಗಳಿಗೆ ಓದುಬರಹದಲ್ಲಿ ಪ್ರಗತಿ. ಪ್ರಯತ್ನದಿಂದ ಉತ್ತಮವಾದ ವಿವಾಹಯೋಗ ಕಂಡುಬರುತ್ತದೆ. ಕುಲದೇವತೆ ಮತ್ತು ತೀರ್ಥಕ್ಷೇತ್ರಗಳ ದರ್ಶನ ಪೂಜನಾದಿಗಳಿಂದ ಎಲ್ಲ ತೊಂದರೆಗಳು ನಿವಾರಣೆ ಸಾಧ್ಯ. ಶನಿಯ ಏಳೂವರೆ ಕಾಟದ ಭಯದ ಕಾರಣವಿಲ್ಲ. ಮಹಿಳೆಯರಿಗೆ ಉತ್ತಮ ಭವಿಷ್ಯವಿದೆ. ಶನಿವಾರ ಉಪೋಷಣೆ ಆಂಜನೇಯ ಪೂಜಾಸೇವೆ ಶೈವಾರಾಧನೆಯಿಂದ ಎಲ್ಲ ತೊಂದರೆಗಳು ನಿವಾರಣೆಯಾಗುವುವು.



# ವಾರ್ತಾಲಹರಿ



## ಉತ್ಸಾಹದ ಮೆಟ್ಲ ಉತ್ಸವ

ತಿ.ತಿ.ದೇ. ದಾಸ ಸಾಹಿತ್ಯ ಪ್ರಾಜೆಕ್ಟ್ ಆಶ್ರಯದಲ್ಲಿ ತಿರುಪತಿಯಲ್ಲಿ 1995 ರ ಡಿಸೆಂಬರ್ 23, 24, 25 ದಿನಗಳಲ್ಲಿ ಮೆಟ್ಲ ಉತ್ಸವ ಉತ್ಸಾಹ ಸಂಭ್ರಮಗಳ ನಡುವೆ ಸಂಪನ್ನವಾಯಿತು. ವಿವಿಧ ಪ್ರಾಂತ್ಯಗಳಿಂದ ಬಂದ 48 ಭಜನಾಮಂಡಲಿಗಳ 2500 ಮಂದಿಗೂ ಮಿಕ್ಕಿದ ಜನ ಹರಿದಾಸ ಭಕ್ತ ಬಂಧುಗಳು ಅಲಿಪಿರಿಯಿಂದ ಆಲಯದವರೆಗೆ ಕನ್ನಡದ ಕಂಪನ್ನು ಬೀರುತ್ತ, ಭಕ್ತಿಯ ಉಸಿರಾಡುತ್ತ, ಭಗವನ್ನಾಮ ಸಂಕೀರ್ತನೆಯಲ್ಲಿ ತೇಲುತ್ತ, ಗೋವಿಂದ ನಾಮ ಘೋಷ ನಭವನ್ನಡರುವಂತೆ ಮಾಡಿ, ದೆಟ್ಟೆ ದೆಸಲಾದುದುದೊ ಎಂಬಂತೆ ನಡೆದಿರಲು, ಸ್ವಾಮಿ ದರ್ಶನ ಕಾತರದಲ್ಲಿ ಹೆಣ್ಣು ಗಂಡೆನ್ನದೆ, ಬಾಲವೃದ್ಧರೆನ್ನದೆ, ಎಲ್ಲ ಒಂದೆ ಗುರಿಯತ್ತ ಸಾಗುವ ಉದ್ದೇಶದಿಂದ, 'ಗುರಿಯಷ್ಟೆ ಮಾರ್ಗವೂ ಮುಖ್ಯ' - ಎಂಬುದನ್ನು ಮನದಟ್ಟು ಮಾಡುತ್ತ, ಮಾಡಿಕೊಳ್ಳುತ್ತ, ಮೆಟ್ಟಿಲ ಪೂಜೆಗೈಯ್ಯುತ್ತ, ಸಾಗಿದ್ದು ದೇವದುರ್ಲಭ ದೃಶ್ಯವಾಗಿದ್ದಿತೆಂಬುದು ಸಾಮಾನ್ಯಾಭಿಪ್ರಾಯ.

ತಿರುಪತಿಯ ಎರಡನೆಯ ಸತ್ರದ ಶ್ರೀ ಗೋವಿಂದರಾಜಸ್ವಾಮಿ ಕಲ್ಯಾಣ ಮಂಟಪದಲ್ಲಿ 23-12-1995 ರಂದು ಮಧ್ಯಾಹ್ನ ಶ್ರೀ ಶ್ರೀನಿವಾಸ ಭಜನಸ್ಪರ್ಧೆಯಲ್ಲಿ ನಲವತ್ತೆಂಟು ಭಜನ ಮಂಡಲಿಗಳು ನಾಲ್ಕು ತಂಡಗಳಲ್ಲಿ ಭಜನ ಸ್ಪರ್ಧೆಯಲ್ಲಿ ಪಾಲುಗೊಂಡವು. ಪೇಜಾವರದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು, ಫಲಿಮಾರು









ಮಠದ ಶ್ರೀ ಶ್ರೀ ವಿದ್ಯಾಧೀಶತೀರ್ಥರು (ಕಿರಿಯ ಪಟ್ಟ) ಉತ್ಸವ ಕಾರ್ಯಕ್ರಮದಲ್ಲಿ ಅತಿಥಿಗಳಾಗಿದ್ದರು. ಶ್ರೀ ಶ್ರೀ ವಿದ್ಯಾಧೀಶರು ದಾಸ ಸಾಹಿತ್ಯ ಧ್ವಜವನ್ನು ಹಾರಾಡಿಸಿ ಉತ್ಸವದ ನಾಂದಿ ಹಾಡಿದರು. ಪೇಜಾವರ ಶ್ರೀಪಾದಂಗಳು ಸ್ವಾಮಿ ಪೂಜೆ ಮಾಡಿ ಕಾರ್ಯಕ್ರಮವನ್ನು ಹರಸಿದರು. ತಿ.ತಿ.ದೇ. ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಟಿ. ಸತ್ಯನಾರಾಯಣರಾಯರು ವಿಧಿವತ್ ನಿರ್ದೇಶಕರಾಗಿ ನಿಂತು ನೇತೃತ್ವ ವಹಿಸಿದ ಭಜನ ಸ್ಪರ್ಧೆಗಳು 24-12-1995 ರಂದೂ ಮುಂದುವರೆದು, ಕೌತಾಳದ ಶ್ರೀ ಗುರುಜಗನ್ನಾಥದಾಸ ಭಜನ ಮಂಡಳಿ ಪ್ರಥಮ ಸ್ಥಾನವನ್ನೂ, ಗುಲ್ಬರ್ಗದ ಶ್ರೀ ರುಕ್ಮಿಣೀಶ ಭಜನ ಮಂಡಳಿ ಎರಡನೇ ಸ್ಥಾನವನ್ನೂ, ಶಕ್ತಿ ನಗರದ ಶ್ರೀ ಕೊರವರೇಶ ಭಜನೆಮಂಡಳಿ ಮೂರನೇ ಸ್ಥಾನವನ್ನೂ ಪಡೆದವು. ಭಜನ ಸ್ಪರ್ಧೆಯ ನ್ಯಾಯಮೂರ್ತಿಗಳಾಗಿ ಶ್ರೀ . ಅರಳುಮಲ್ಲಿಗೆ ಪಾರ್ಥಸಾರಥಿ, ಶ್ರೀ ಸದಾನಂದಶಾಸ್ತ್ರಿ, ಶ್ರೀ ಪ್ರಹ್ಲಾದಾಚಾರ್ಯ ಜೋಷಿ, ಶ್ರೀ ಚಿತ್ತೂರು ಶ್ರೀನಿವಾಸರಾವ್ ಅವರುಗಳು ವ್ಯವಹರಿಸಿದರು. 23-12-1995 ರಂದು ರಾತ್ರಿ ಭದ್ರಗಿರಿಯ ಸಂತ ಶ್ರೀ ಅಚ್ಯುತದಾಸರು ಶ್ರೀನಿವಾಸಕಲ್ಯಾಣ ಹರಿಕಥೆಯನ್ನು ಆರಂಭಿಸಿದರು. (ಈ ಹರಿಕಥೆ 25-12-95 ರಂದು ಮುಂದುವರೆದು 26-12-95 ರಂದು ಪೂರ್ಣವಾಯಿತು.)

25-12-95 ರಂದು ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದಿಂದ ನಗರದ ಪ್ರಮುಖ ಬೀದಿಗಳಲ್ಲಿ ಹರಿದಾಸರ ಮೆರವಣಿಗೆ. ಈ ಮೆರವಣಿಗೆಯ ಒಂದು ಪ್ರಮುಖ ಅಂಶವೆಂದರೆ ತಿರುಪತಿಯಲ್ಲಿ ಪ್ರಥಮಬಾರಿಗೆ. ಡೊಳ್ಳು ವಾದ್ಯದ ಸಂಗೀತ ವಿನ್ಯಾಸವಾದದ್ದು. ಪುರಬೀದಿಗಳಲ್ಲಿ ಹರಿದಾಸರು ಸಾಮೂಹಿಕ ಗಾನದ ನಡುವೆ ನಡೆದು ಬರುತ್ತಿರಲು ಇಡೀ ನಗರವೇ ಹರಿ

ಭಕ್ತ ಸಮೂಹದಿಂದ ಕೂಡಿದೆಯೋ ಎಂಬಂತೆ ಇದ್ದಿತು. ಅನ್ನಮಾಚಾರ್ಯ ಕಲಾಮಂದಿರವನ್ನು ಸೇರಿದ ಮೆರವಣಿಗೆಯಲ್ಲಿ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶ್‌ಕುಮಾರ್, ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಟಿ. ಸತ್ಯನಾರಾಯಣರಾವ್, ಪೌರಸಂಬಂಧಾಧಿಕಾರಿ ಶ್ರೀ ಸುಭಾಷ್‌ಗೌಡ್ ಮುಂತಾದ ಹಿರಿಯರು ಕಲೆತಿದ್ದರು. ಮೆರವಣಿಗೆಯ ಮುಂದೆ ನಡೆದು ಶ್ರೀ ಶ್ರೀ ವಿಶ್ವೇಶ ತೀರ್ಥ ಶ್ರೀಪಾದರೂ, ಶ್ರೀ ಶ್ರೀ ವಿದ್ಯಾಧೀಶ ಶ್ರೀಪಾದರೂ ಮಾರ್ಗದರ್ಶನ ಮಾಡಿದರು.

ಅನ್ನಮಾಚಾರ್ಯ ಕಲಾಮಂದಿರದಲ್ಲಿ ಹರಿದಾಸ ಸಂಧ್ಯೆ ಕಾರ್ಯಕ್ರಮ. ದಾಸ ಸಾಹಿತ್ಯ ಪ್ರಾಜೆಕ್ಟಿನ ವಿಶೇಷಾಧಿಕಾರಿ ಶ್ರೀ ಕೆ. ಅಪ್ಪಣ್ಣಾಚಾರ್ಯರಿಂದ ಪ್ರಾಜೆಕ್ಟ್ ಕಾರ್ಯಕ್ರಮದ ವಿವರ ವರದಿ, ಹರಿದಾಸರ ಹಿರಿಮೆ, ಗರಿಮೆಗಳ ವಿವರಣೆ, ಭಕ್ತಿಯ ಅಗತ್ಯದ ಅವಧಾರಣೆ ಆಯಿತು. ಶ್ರೀಪಾದ ದ್ವಯರು ಅನುಗ್ರಹ ಭಾಷಣ ನೀಡಿ ಮಂಡಲಿಗಳನ್ನು ಆಶೀರ್ವದಿಸಿದರು. ಅಲ್ಲಿಯೇ ಶ್ರೀ ಗುರು ಶ್ರೀಶವಿಠಲರ ಕೃತಿಗಳು ಹಾಗೂ ಭಜನ ತತ್ವ ಪ್ರಕಾಶಿಕೆಗಳು ಬಿಡುಗಡೆಯಾದವು.

26-12-95 ರಂದು ಬೆಳಗ್ಗೆ ಅಲಿಪಿರಿಯಲ್ಲಿ ಶ್ರೀಪಾದಂಗಳಿಂದ ಮೆಟ್ಟಿಲ ಪೂಜೆ. ಸ್ವಾಮಿಯ ಮೆರವಣಿಗೆಗೆ ಬರುವ ಆನೆಗಳು ಅಲಿಪಿರಿಗೆ ಬಂದು ಭಕ್ತ ಬೃಂದವನ್ನು ಬೆಟ್ಟಕ್ಕೆ ಆಹ್ವಾನಿಸಿದವು. ಪೇಜಾವರ ಸ್ವಾಮಿಗಳೂ, ಫಲಿಮಾರು ಕಿರಿಯ ಶ್ರೀಪಾದಂಗಳೂ, ತಿ.ತಿ.ದೇ. ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಸತ್ಯನಾರಾಯಣ ರಾಯರೂ

## ಚಿತ್ರಸೂಚಿ

ಪುಟ - 33

ದಾಸಸಾಹಿತ್ಯ ಧ್ವಜಾರೋಹಣ

ಭಜನಸ್ಪರ್ಧೆಯ ಮೂರು ನೋಟ

ಪುಟ - 34

ಹರಿದಾಸರ ಮೆರವಣಿಗೆಯ ಮೂರು ನೋಟ

ಸಂತ ಭದ್ರಗಿರಿ ಅಚ್ಯುತದಾಸರು

ಪುಟ 35

ಪುಸ್ತಕ ಬಿಡುಗಡೆಯಲ್ಲಿ

ಶ್ರೀ ಶ್ರೀ ವಿದ್ಯಾಧೀಶತೀರ್ಥರು

ಅಲಿಪಿರಿಯಲ್ಲಿ ಮೆಟ್ಟಿಲ ಪೂಜೆಯಲ್ಲಿ ನಿರತ ಶ್ರೀಪಾದಂಗಳವರು








## ಮೆಟ್ಲ ಉತ್ಸವದಲ್ಲಿ ಹಾಗೂ ಭಜನ ಸ್ಪರ್ಧೆಗಳಲ್ಲಿ ಭಾಗವಹಿಸಿದ ಮಂಡಲಿಗಳು

1. ರಾಮಚಂದ್ರ ಭಜನ ಮಂಡಲಿ - ಸಿಂಧನೂರು.
2. ವೆಂಕಟೇಶ್ವರ ಭಜನ ಮಂಡಲಿ - ಗುಲ್ಬರ್ಗ.
3. ಅಶ್ವತ್ಥಾಂಜನೇಯ ಭಜನ ಮಂಡಲಿ - ಬಿಜಾಪುರ.
4. ಭೋಗಾಪುರೇಶ ಭಜನ ಮಂಡಲಿ - ನವಲಿ.
5. ಕೋದಂಡರಾಮ ಭಜನ ಮಂಡಲಿ - ರಾಯಚೂರು.
6. ಈಶ್ವರ ಭಜನ ಮಂಡಲಿ - ರಾಯಚೂರು.
7. ರಾಮ ಭಜನ ಮಂಡಲಿ - ಆದೋನಿ.
8. ಗುರುರಾಜ ಭಜನ ಮಂಡಲಿ - ಶ್ರೀರಾಮನಗರ.
9. ಗುರುಜಗನ್ನಾಥದಾಸ ಭಜನ ಮಂಡಲಿ - ಕೌತಾಳ.
10. ಶ್ರೀಶ ಪ್ರಾಣೇಶ ದಾಸ ಭಜನ ಮಂಡಲಿ - ಲಿಂಗಸುಗೂರು.
11. ರಾಘವೇಂದ್ರ ಯುವಕ ಭಜನ ಮಂಡಲಿ - ಗಜೇಂದ್ರಗಡ.
12. ಗುರುಸಾರ್ವಭೌಮ ಭಜನ ಮಂಡಲಿ - ಯರಮರಸ.
13. ರಾಘವೇದ್ರ ಸ್ವಾಮಿ ಭಜನ ಮಂಡಲಿ - ಮದರಾಸು.
14. ಶ್ರೀದವಿಠಲ ಭಜನ ಮಂಡಲಿ - ಯಲಬುರ್ಗ.
15. ಪಾವನ ಭಜನ ಮಂಡಲಿ - ಮಾನವಿ.
16. ದಾಸಸಾಹಿತ್ಯ ಭಜನ ಮಂಡಲಿ - ಹೈದರಾಬಾದ್.
17. ಗುರುರಾಜ ಭಜನ ಮಂಡಲಿ - ಲಿಂಗಸುಗೂರು.
18. ಗುರುರಾಜ ಭಜನ ಮಂಡಲಿ - ಯಲಬುರ್ಗ.
19. ಗುರುಜಗನ್ನಾಥ ದಾಸ ಭಜನ ಮಂಡಲಿ - ಗಜೇಂದ್ರಗಡ.
20. ರಾಘವೇಂದ್ರ ಸೇವಾಸಮಿತಿ - ಮಹಬೂಬ್‌ನಗರ.
21. ಪುರಂದರ ದಾಸ ಸಂಘ - ಮದರಾಸು.
22. ಪ್ರಹ್ಲಾದ ರಾಜ ಭಜನ ಮಂಡಲಿ - ನಾರಾಯಣಪೇಟೆ.
23. ಗುರುಮಧ್ವ ಸೇವಾಸಮಿತಿ - ಅನಂತಪುರ.
24. ವಾದಿರಾಜ ಭಜನ ಮಂಡಲಿ - ಸಿರುಗುಪ್ಪ.
25. ಗುರುರಾಜ ಭಜನ ಮಂಡಲಿ - ಕುಷ್ಟಗಿ.
26. ಕೊರವರೇಶ ಭಜನ ಮಂಡಲಿ - ಶಕ್ತಿನಗರ.
27. ಪರಿಮಳ ಭಜನ ಮಂಡಲಿ - ಕೊಪ್ಪಳ.
28. ವರದೇಶ ವಿಠಲ ಭಜನ ಮಂಡಲಿ - ಸಂತೇಕೆಲ್ಲೂರು.
29. ವಿನಾಯಕ ಭಜನ ಮಂಡಲಿ - ಮಾನವಿ.
30. ಗುರುರಾಜ ಭಜನ ಮಂಡಲಿ - ರಾಯಚೂರು.
31. ರಾಘವೇಂದ್ರ ಮಹಿಳಾ ಭಜನ ಮಂಡಲಿ - ಮಂತ್ರಾಲಯ.
32. ಚಂದ್ರಿಕಾ ಮಹಿಳಾ ಭಜನ ಮಂಡಲಿ - ಧಾರವಾಡ.
33. ಗೋಪಾಲವಿಠಲ ಮಹಿಳಾ ಭಜನ ಮಂಡಲಿ - ಸಿಂಧನೂರು.
34. ಪರಿಮಳ ಭಜನ ಮಂಡಲಿ - ಹೊಂಬಾಳ.
35. ವ್ಯಾಸದಾಸ ಅಬಲಾ ಮಂಡಲಿ - ರಾಯಚೂರು.
36. ಭಾರತೀ ಮಹಿಳಾ ಭಜನ ಮಂಡಲಿ - ತಿರುಪತಿ.
37. ರುಕ್ಮಿಣೀಶ ಮಹಿಳಾ ಭಜನ ಮಂಡಲಿ - ತಿರುಪತಿ.
38. ಲಕ್ಷ್ಮೀ ಶೋಭಾನೆ ಮಹಿಳಾ ಭಜನ ಮಂಡಲಿ - ಅನಂತಪುರ.
39. ಪ್ರಸನ್ನ ವೆಂಕಟದಾಸ ಮಹಿಳಾ ಮಂಡಲಿ - ಬಾಗಲಕೋಟೆ.
40. ಜಾಹ್ನವಿ ಭಜನ ಮಂಡಲಿ - ಬೆಂಗಳೂರು.
41. ಪರಿಮಳ ಮಹಿಳಾ ಭಜನ ಮಂಡಲಿ - ಬಿಜಾಪುರ.
42. ಮಹಾಲಕ್ಷ್ಮಿ ಭಜನ ಮಂಡಲಿ - ಬೆಂಗಳೂರು.
43. ಭಾರತಿ ಮಹಿಳಾ ಭಜನ ಮಂಡಲಿ - ಕುಕನೂರು.
44. ಪುರಂದರ ಭಜನ ಮಂಡಲಿ - ಕಂಪ್ಲಿ.
45. ಇಂದಿರೇಶ ಮಹಿಳಾ ಭಜನ ಮಂಡಲಿ - ರಾಯಚೂರು.
46. ಅಂಭೃಣಿ ಮಹಿಳಾ ಭಜನ ಮಂಡಲಿ - ಬೆಂಗಳೂರು.
47. ರುಕ್ಮಿಣಿ ಮಹಿಳಾ ಭಜನ ಮಂಡಲಿ - ಗುಲ್ಬರ್ಗ.
48. ಲಕ್ಷ್ಮೀಶೋಭಾನೆ ಮಹಿಳಾ ಭಜನ ಮಂಡಲಿ - ಹೈದರಾಬಾದ್.



ಭಜನಮಂಡಲಿಗಳ ಮುಂದಾಳುಗಳಾಗಿ ಬೆಟ್ಟವ ನ್ನೇರಿದರು. ಹರಿದಾಸರು ಹಾಡಿದ ಶ್ರೀನಿವಾಸನ ಸಂಸ್ತುತಿಯ ಕೀರ್ತನೆಗಳನ್ನು ಹೇಳುತ್ತ ಮೆಟ್ಟಿಲ ಪೂಜೆ ಮಾಡುತ್ತ ಭಜನಮಂಡಲಿಗಳು ಸುನಾ ಯಾಸವಾಗಿ ತಿರುಮಲೆಯನ್ನು ಸೇರಿದವು. ಅಲ್ಲಿನ ಆಸ್ಥಾನ ಮಂಟಪದಲ್ಲಿ ಸಂತ ಅಚ್ಯುತದಾಸರು ಶ್ರೀನಿವಾಸಕಲ್ಯಾಣವನ್ನು ಮುಂದುವರಿಸಿ ಮಂಗಳ ಹಾಡಿದರು. ಅಷ್ಟೂ ಭಜನ ಮಂಡಲಿಗಳೂ ಶ್ರೀ ಟಿ. ಸತ್ಯನಾರಾಯಣರಾವ್ ಅವರ ನೇತೃತ್ವದಲ್ಲಿ ವೈಕುಂಠಂ ಕ್ಯೂಕಾಂಪ್ಲೆಕ್ಸ್ ಮೂಲಕ ನಡೆದು ಆಲ ಯವನ್ನು ಪ್ರವೇಶಿಸಿ ಸ್ವಾಮಿ ದರ್ಶನ ಪಡೆದವು.

## ಭಾಗವತ ಪ್ರವಚನಗಳು

ತಿ.ತಿ.ದೇ. ಗಳ ದಾಸಸಾಹಿತ್ಯ ಪ್ರಾಜೆಕ್ಟ್‌ವತಿ ಯಿಂದ ತಿರುಪತಿಯ ಅನ್ನಮಾಚಾರ್ಯ ಕಲಾಮಂ ದಿರದಲ್ಲಿ 1995 ರ ಡಿಸೆಂಬರ್ 14 ರಿಂದ 21 ರ ವರೆಗೆ ಭಗವದ್ಗೀತಾ ಭಾಗವತ ಪ್ರವಚನಗಳು ನಡೆ ದವು.

ಭಗವದ್ಗೀತೆಯ ಬಗ್ಗೆ ಪೇಜಾವರ ಮಠದ ಶ್ರೀ ಶ್ರೀ ವಿಶ್ವೇಶ ತೀರ್ಥ ಶ್ರೀಪಾದರು ಮೂರುದಿನ ಸಂಜೆಗಳಲ್ಲಿ ಭಕ್ತ ಜನ ಹೃದಯಾನಂದಕರವಾಗಿ ಭಗವದ್ಗೀತೆಯ ಸುಳಿವು ಸೂಕ್ಷ್ಮಗಳನ್ನು ತಮ್ಮದೇ ಆದ ಜನಪ್ರಿಯ ಶೈಲಿಯಲ್ಲಿ ವಿವರಿಸಿದರೆ ನಂತ ರದ ಮೂರುದಿನ ಭಾಗವತದ ಬಗ್ಗೆ ಶ್ರೋತೃಗಳ ಮನಂಬುಗುವಂತೆ ವಿವರಿಸಿದವರು ಫಲಿಮಾರು ಮಠದ ಕಿರಿಯ ಶ್ರೀಗಳು ಶ್ರೀ ಶ್ರೀ ವಿದ್ಯಾಧೀಶ ತೀರ್ಥ ಶ್ರೀಪಾದರು.

ದಿನವೂ ಸಂಜೆ ಅನ್ನಮಾಚಾರ್ಯ ಕಲಾ ಮಂದಿರದಲ್ಲಿ ಎಂದಿಗಿಂತ ಹೆಚ್ಚಿನ ಭಕ್ತರು ಸೇರಿದು ಶ್ರೀಪಾದಂಗಳವರ ಆಶೀರ್ವಚನ ಪೂರ್ವಕವಾದ ಪ್ರವಚನಗಳನ್ನು ಕೇಳಿ ನಲಿದರು. ದಾಸ ಸಾಹಿತ್ಯ ಪ್ರಾಜೆಕ್ಟಿನ ವಿಶೇಷಾಧಿಕಾರಿ ಶ್ರೀ ಕೆ. ಅಪ್ಪಣ್ಣಾಚಾ ರ್ಯರು ಶ್ರೀಪಾದಂಗಳ ಹಾಗೂ ಭಕ್ತರ ನಡುವಣ. ಸೇತುವೆಯಂತೆ ಅಲ್ಲಲ್ಲಿ ಸ್ವಾಮಿಜಿಯವರುಗಳ ಅಭಿ ಪ್ರಾಯಗಳನ್ನು ವಿವರಿಸಿ, ಉಪದೇಶ ಹೆಚ್ಚಿಗೆ ಮನ ದಟ್ಟಾಗುವಲ್ಲಿ ಶ್ರಮಿಸಿದರು.

# ನೂತನ ವರ್ಷದ ಆರಂಭ

ತಿರುಪತಿ - ಜನವರಿ -3

1996 ಜನವರಿ 1 ರಂದು ವೈಕುಂಠ ಏಕಾದಶಿಯೂ ಸೇರಿ ಬಂದು ತಿರುಮಲೆಯಲ್ಲಿ ಸ್ವಾಮಿ ದರ್ಶನಕ್ಕೆ ಬಂದ ಯಾತ್ರಿಕರ ಸಂಖ್ಯೆ ಒಂದೂವರೆ ಲಕ್ಷ ಮಂದಿಗೂ ಹೆಚ್ಚಿಗೆ ಎಂದು ಅಂದಾಜು ಮಾಡಲಾಗಿದೆ.

ಪ್ರತಿ ವರ್ಷದ ಆರಂಭದ ದಿನವೂ ತಿರುಮಲೆಯಲ್ಲಿ ವಿಪರೀತ ಜನಸಂದಣಿ ಎಂಬುದು ವರ್ಷ ವರ್ಷವೂ ಅನುಭವಕ್ಕೆ ಬರುವಂತಹ ಸಂಗತಿಯೇ ಆಗಿ ಈ ಬಾರಿಯ ವೈಕುಂಠ ಏಕಾದಶಿಯಂದು ಮತ್ತೂ ಹೆಚ್ಚ ಬಹುದಾದ ಯಾತ್ರಿಕ ಗಣದ ಸ್ವಾಗತಕ್ಕೆಂದು ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶ್‌ಕುಮಾರ್ ಅವರ ನೇತೃತ್ವದಲ್ಲಿ ವ್ಯಾಪಕವಾದ ಏರ್ಪಾಡುಗಳು ನಡೆದಿದ್ದವು. ವೈಕುಂಠಂ ಕ್ಯೂಕಾಂಪ್ಲೆಕ್ಸ್‌ಗೂ ಪಿ. ಪಿ. ಷೆಡ್ಸ್‌ಗಳಿಗೂ ಹೊರಗಡೆಯ ಸರತಿಯ ಸಾಲಿನಲ್ಲಿ ಎರಡು ಕಿಲೋಮೀಟರಿಗೂ ಮೀರಿದಂತೆ ನೆರಳನ್ನು ಏರ್ಪಡಿಸಲಾಗಿದ್ದಿತು. (ಈ ಎರಡೂ ಸಾಲುಗಳೂ ಡಿಸೆಂಬರ್ ಮೂವತ್ತೊಂದರಂದು ರಾತ್ರಿಯೇ ತುಂಬಿದ್ದಿತು.) ಹೊರಗಡೆಯ ಸರತಿಯ ಸಾಲಿನಲ್ಲಿ ನಿಂತವರಿಗೆ ತಿ.ತಿ.ದೇ.ಗಳಿಂದಲೂ ಖಾಸಗಿಯವರಿಂದಲೂ, ಆಹಾರದ ಪೊಟ್ಟಣಗಳನ್ನು ವಿತರಣೆ ಮಾಡಲಾಯಿತು. ಟಾಟಾ ಟೀ ಕಂಪನಿಯವರ ಕೊಡುಗೆಯಾದ ಟೀಯನ್ನು ವಿತರಿಸಲಾಯಿತು. ತಿ.ತಿ.ದೇ. ಪರವಾಗಿ ಮಕ್ಕಳಿಗಾಗಿ ಹಾಲನ್ನು ಸರಬರಾಜು ಮಾಡಲಾಯಿತು. ಸರತಿಯ ಸಾಲಿನಲ್ಲಿಯೂ, ಸರತಿಯ ಕೋಣೆಗಳಲ್ಲಿಯೂ ಕ್ಲೋಸ್ಡ್ ಸರ್ಕ್ಯೂಟ್ ಟಿ. ವಿ. ಯ ಮೂಲಕ ಭಕ್ತಿಕಾರ್ಯಕ್ರಮಗಳನ್ನು ಪ್ರಸಾರ ಮಾಡಲಾಯಿತು.

ತಿರುಪತಿಯಿಂದ ತಿರುಮಲೆಗೆ ಆಗಮಿಸುವ ಜನರಿಗಾಗಿ ಹೆಚ್ಚಿನ ಬಸ್‌ಗಳನ್ನು ನಡೆಸಲಾಯಿತು. ಹೋಗಿ ಬರುವಿಕೆ ನಿರಂತರವಾಗಿರುವಂತೆ ತಿರುಮಲೆಯ ಎರಡೂ ಘಟ್ಟದ ರಸ್ತೆಗಳನ್ನೂ 24 ಗಂಟೆಗಳೂ ತೆಗೆದಿರಿಸಿದ್ದೇ ಅಲ್ಲದೆ, ನಡೆದು ಬೆಟ್ಟವನ್ನೇರುವವರಿಗಾಗಿ ವಿಶೇಷ ರಕ್ಷಕ ದಳ ನಿರಂತರ ಗಸ್ತು ತಿರುಗುವ ಏರ್ಪಾಡು ಮಾಡಲಾಗಿದ್ದಿತು. ತಿರುಮಲೆಯಲ್ಲಿ ಮೊದಲು ಬಂದವರಿಗೆ ಮೊದಲು ಸೂತ್ರದನ್ವಯ ವಸತಿ ಸೌಲಭ್ಯನೀಡಲಾಯಿತು. ಅತಿಗಣ್ಯವ್ಯಕ್ತಿಗಳನ್ನು ಸಾಮಾನ್ಯ ಯಾತ್ರಿಕರಂತೆಯೇ ನೋಡಲಾಗುವುದೆಂಬ ಸೂಚನೆ ಪತ್ರಿಕೆಗಳ ಮೂಲಕ ನೀಡಲಾಗಿದ್ದು ವಿಶೇಷವಾದ ಒತ್ತಡ ಬೀಳದಂತೆ ನೋಡಿಕೊಳ್ಳಲಾಯಿತು. ವಾಹನ ನಿಲ್ದಾಣಗಳು, ಏಕ ಮುಖಸಂಚಾರ, ಮೊದಲಾದವುಗಳೊಡನೆ ರಕ್ಷಣೆ, ಶುಚಿತ್ವಗಳನ್ನು ನೋಡಿಕೊಳ್ಳಲಾಯಿತು. ಅಲ್ಲಲ್ಲಿ ಸೇವಾಕೇಂದ್ರಗಳು, ವೈದಕೀಯ ಕೇಂದ್ರಗಳನ್ನು ಏರ್ಪಾಡು ಮಾಡಲಾಗಿದ್ದಿತು.

ನೂತನ ಸಂವತ್ಸರಾರಂಭ ಹಾಗೂ ವೈಕುಂಠ ಏಕಾದಶಿಗಳ ಪ್ರಾಮುಖ್ಯವನ್ನು ಸಾರುವಂತೆ ಅಲ್ಲಲ್ಲಿ ವಿದ್ಯುದ್ದೀಪಾಲಂಕಾರಗಳು, ಸ್ವಾಗತ ಕಮಾನುಗಳು ಏರ್ಪಾಡಾಗಿದ್ದವು. ಜನವರಿ ಒಂದರಂದು ಮೊದಲು ಚಿನ್ನದ ರಥದಲ್ಲಿ ಸ್ವಾಮಿಯ ಮೆರವಣಿಗೆಯೂ ನಂತರ ಸ್ವಾಮಿ ಪುಷ್ಕರಿಣಿಯಲ್ಲಿ ಸ್ವಾಮಿಯ ಜಲವಿಹಾರವೂ ನಡೆದು ಅತ್ಯಂತ ಹೆಚ್ಚಿನ ಜನವನ್ನು ಆಕರ್ಷಿಸಿದವು.

ಒಂದರಂದು ರಾತ್ರಿಯ ಹೊತ್ತಿಗೆ ಸುಮಾರು 94 ಸಾವಿರ ಮಂದಿ ದರ್ಶನ ಪಡೆದರು. ಇದೇ ಹೊತ್ತಿನಲ್ಲಿ 30 ರೂಗಳ ವಿಶೇಷ ಪ್ರವೇಶದಲ್ಲಿ 30,000 ಕ್ಕೂ ಹೆಚ್ಚು ಮಂದಿ ಸ್ವಾಮಿದರ್ಶನವನ್ನು ಪಡೆದಿದ್ದರು. ಜೊತೆಗೇ ಇನ್ನೂ ದರ್ಶನದ ಸಾಲಿನಲ್ಲಿ 40,000 ಕ್ಕೂ ಮಿಕ್ಕ ಜನವಿದ್ದರು. ಸ್ವಾಮಿದರ್ಶನ 31 ಹಾಗೂ 1ರ ನಡುವಿನ ರಾತ್ರಿ 12.30 ಕ್ಕೇ ಆರಂಭವಾಯಿತು. ಸ್ವಾಮಿಸೇವೆಯಲ್ಲಿ ಮುಡಿಯನ್ನು ನೀಡಿದವರು ಮೂವತ್ತು ಸಾವಿರಕ್ಕೂ ಹೆಚ್ಚು. ಇದರಂತೆಯೇ ಜನವರಿ 1ರ ಸಂಜೆಹೊತ್ತಿಗೆ ನಿತ್ಯಾನ್ನದಾನ ಯೋಜನೆಯಲ್ಲಿ ಉಚಿತ ಭೋಜನ ಸೌಲಭ್ಯವನ್ನು ಪಡೆದ ಜನದ ಸಂಖ್ಯೆ 30,000 ದಾಟಿದ್ದಿತು. ಅಂದಿನ ಸಂಜೆಯವರೆಗಿನ ಹುಂಡಿ ಆದಾಯ 38,75,000. (ಇನ್ನೂ ಹಲವಾರು ಚೀಲಗಳ ಪರಕಾಮಣಿ ಆಗದೇಕಿತ್ತು ಎಂದು ವರದಿಯಾಗಿದೆ.)



## ಧರ್ಮಕರ್ತರ ಮಂಡಳಿಯ ತೀರ್ಮಾನಗಳು

ನವಂಬರ್ ತಿಂಗಳ ಕೊನೆಯ ದಿನದಂದು ತಿರುಮಲೆಯ ಎಸ್. ವಿ. ಅತಿಥಿಗೃಹದಲ್ಲಿ ಸಮಾವೇಶಗೊಂಡ ತಿ.ತಿ.ದೇ. ಧರ್ಮಕರ್ತರ ಮಂಡಳಿಯವರು ತಿ.ತಿ.ದೇ. ಮುದ್ರಣಾಲಯದ ಉದ್ಯೋಗಿಗಳ ನಿವೃತ್ತಿಯ ವಯಸ್ಸನ್ನು 58 ರಿಂದ 60 ವರ್ಷಕ್ಕೆ ಏರಿಸಿ, ಈ ತೀರ್ಮಾನವನ್ನು ಆಂಧ್ರಪ್ರದೇಶ ಸರ್ಕಾರದ ಅನುಮೋದನೆಗಾಗಿ ಕಳುಹಿಸಲು ತೀರ್ಮಾನಿಸಿದ್ದಾರೆ.

ತಿರುಪತಿಯ ಮಠದವರು ನಿರ್ವಹಿಸುತ್ತಿದ್ದ ಗಾಳಿಗೋಪುರದ ಜೀರ್ಣೋದ್ಧಾರ ಕಾರ್ಯವನ್ನು 3.75 ಲಕ್ಷ ರೂಪಾಯಿಗಳ ಅಂದಾಜು ವೆಚ್ಚದಲ್ಲಿ ಕೈಗೆತ್ತಿಕೊಳ್ಳಬೇಕೆಂದು ತೀರ್ಮಾನಿಸಲಾಯಿತು.

ಕಂಚಿ ಕಾಮಕೋಟಿ ಪೀಠಾಧಿಪತಿಗಳ ಅಪೇಕ್ಷೆಯಂತೆ ಮೇಘಾಲಯದಲ್ಲಿ ಧ್ಯಾನ ಮಂದಿರ ವೊಂದನ್ನು ನಿರ್ಮಿಸುವ ವಿಚಾರವನ್ನು ಅಂಗೀಕರಿಸಲಾಯಿತು.

ತಿ.ತಿ.ದೇ. ಶಾಲೆಗಳಲ್ಲಿ ಭರ್ತಿ ಮಾಡಬೇಕಾದ ಉಪಾಧ್ಯಾಯರ ಹುದ್ದೆಗಳನ್ನು ಆದಷ್ಟು ಬೇಗ ತುಂಬಿಸಲು ತೀರ್ಮಾನಿಸಲಾಯಿತು.

## ತಿರುಮಲೆಯಲ್ಲಿ ಮುಖ್ಯಮಂತ್ರಿ

ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಚಂದ್ರಬಾಬು ನಾಯುಡು ಅವರು ಡಿಸೆಂಬರ್ ಹದಿನೈದರಂದು ಶುಕ್ರವಾರ ತಿರುಮಲೆಯ ಆಲಯಕ್ಕೆ ಆಗಮಿಸಿ ಸ್ವಾಮಿಯ ನಿಜಪಾದ ದರ್ಶನ ಸೇವೆಯಲ್ಲಿ ಪಾಲುಗೊಂಡರು.

ಮುಖ್ಯಮಂತ್ರಿಗಳಿಗೆ ಮಹಾದ್ವಾರ ಪ್ರವೇಶದ ಸೌಲಭ್ಯವಿದ್ದರೂ ವೈಕುಂಠಂ ಕ್ಯೂಕಾಂಪ್ಲೆಕ್ಸ್ ಮೂಲಕ ಸಾಮಾನ್ಯ ಯಾತ್ರಿಕರಂತೆ ಆಲಯ ಪ್ರವೇಶ ಮಾಡಿದ ಮುಖ್ಯಮಂತ್ರಿಯನ್ನು ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್, ತಿರುಮಲೆಯ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಬಾಲಸುಬ್ರಹ್ಮಣ್ಯಂ ಮೊದಲಾದವರು ಸ್ವಾಗತಿಸಿದರು. ಸ್ವಾಮಿಯ ದರ್ಶನಾನಂತರ ರಂಗನಾಯಕ ಮಂಟಪದಲ್ಲಿ ಅವರಿಗೆ ವೇದಾಶೀರ್ವಚನವನ್ನು ನೀಡಲಾಯಿತು. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್ ಅವರು ಮುಖ್ಯಮಂತ್ರಿಗಳಿಗೆ ಸ್ವಾಮಿ ಪ್ರಸಾದಗಳನ್ನು ನೀಡಿದರು.

## ಸ್ವಾಮಿಸೇವೆಯಲ್ಲಿ ಸಾರಿಗೆ ಮಂತ್ರಿ

ಆಂಧ್ರಪ್ರದೇಶದ ರಸ್ತೆಸಾರಿಗೆ ಮಂತ್ರಿ ಶ್ರೀ ನಂದಮೂರಿ ಹರಿಕೃಷ್ಣ ಅವರು ಡಿಸೆಂಬರ್ 29 ರಂದು ಶುಕ್ರವಾರ ತಿರುಮಲೆಯ ಸ್ವಾಮಿಯ ಅಭಿಷೇಕದಲ್ಲಿ ಪಾಲುಗೊಂಡರು.

ತಿರುಮಲೆಗೆ ಗುರುವಾರದಂದೇ ಆಗಮಿಸಿದ ಸಾರಿಗೆ ಮಂತ್ರಿ ಶುಕ್ರವಾರದಂದು ಬೆಳಗ್ಗೆ ಅಭಿಷೇಕ ಸೇವೆಯಲ್ಲಿ ಪಾಲುಗೊಳ್ಳಲು ಆಲಯಕ್ಕೆ ಆಗಮಿಸಿದಾಗ ಅವರನ್ನು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್ ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ ಮೊದಲಾದವರು ಸ್ವಾಗತಿಸಿದರು. ಅವರೊಡನೆ ಧರ್ಮಕರ್ತರ ಮಂಡಳಿಯ ಸದಸ್ಯರೂ ತಿರುಪತಿಯ ಎಂ. ಎಲ್. ಎ. ಶ್ರೀ ಮೋಹನ್ ಅವರೂ ಇದ್ದರು. ಅಭಿಷೇಕದ ನಂತರ ಮಂತ್ರಿಗಳಿಗೆ ಸ್ವಾಮಿ ಪ್ರಸಾದಗಳೊಂದಿಗೆ ವೇದಾಶೀರ್ವಚನ ನೀಡಲಾಯಿತು. ಸ್ವಾಮಿಯ ವಕ್ಷಸ್ಥಲ ಲಕ್ಷ್ಮಿಯ ಬೊಂಬೆಯನ್ನು ಮಂತ್ರಿವರ್ಯರಿಗೆ ನೀಡಲಾಯಿತು.

## ಆತ್ಮೀಯ ವಿದಾಯ

ತಿ.ತಿ.ದೇ. ಪ್ರಕಟನ ವಿಭಾಗದಲ್ಲಿ ಕಳೆದ ಹದಿನೈದು ವರ್ಷಗಳಿಗಿಂತ ಹೆಚ್ಚು ಕಾಲ ಸೇವೆ ಸಲ್ಲಿಸಿದ ತೆಲುಗಿನ ಖ್ಯಾತ ಕವಿ ಶ್ರೀ ಮುದಿವರ್ತಿ ಕೊಂಡಮಾಚಾರ್ಯರಿಗೆ ಅವರ ಪದವಿ ವಿರಮಣ ಕಾಲದಲ್ಲಿ ಜನವರಿ 3 ರಂದು ಹೃದಯಸ್ಪರ್ಶಿ ವಿದಾಯವನ್ನು ಹೇಳಲಾಯಿತು.

ಆಂಧ್ರಪ್ರದೇಶದ ಪ್ರೌಢಶಿಕ್ಷಣ ಶಾಖೆಯಲ್ಲಿ ಅಧ್ಯಾಪಕ ವೃತ್ತಿಯನ್ನು ಆರಂಭಿಸಿ, ತಮ್ಮ ಕಾವ್ಯಕೃಷಿಯಿಂದ ತೆಲುಗು ಸಾಹಿತ್ಯ ಕ್ಷೇತ್ರದಲ್ಲಿ ಗಟ್ಟಿಯಾಗಿ ನಿಲ್ಲುವ ಹಲವಾರು ಕೃತಿಗಳನ್ನು ನೀಡಿದ ಕೊಂಡ



ಮಾಚಾರ್ಯರು ಅಧ್ಯಾಪಕರಾಗಿ ನಿವೃತ್ತರಾದ ಮೇಲೆ ತಿ.ತಿ.ದೇ. ಪ್ರಕಟನ ವಿಭಾಗದಲ್ಲಿ ಸಹಾಯಕರಾಗಿ ಸೇರಿ ಹಲವಾರು ಧಾರ್ಮಿಕ ಪುಸ್ತಕಗಳ ಪ್ರಕಟನೆಯಲ್ಲಿ ನೆರವು ನೀಡಿದ್ದೇ ಅಲ್ಲದೆ. ಈ ಅವಧಿಯಲ್ಲಿಯೇ ಅನ್ನಮಾಚಾರ್ಯರ ಹಲವಾರು ಕೀರ್ತನೆಗಳನ್ನು ಸೀಸಪದ್ಯಗಳಾಗಿ ರೂಪಾಂತರಿಸಿ ನಾಲ್ಕಾರು ಸಂಪುಟಗಳಲ್ಲಿ ಪ್ರಕಟಿಸಿದ್ದಾರೆ.

ಅವರ ಪದವಿ ವಿರಮಣ ಸಭೆಯಲ್ಲಿ ಸಪ್ತಗಿರಿ ಕಾರ್ಯಾಲಯದಲ್ಲಿ ಏರ್ಪಡಿಸಲಾಗಿದ್ದ ಸರಳ ಸಮಾರಂಭದಲ್ಲಿ ಸಂಪಾದಕ ಎಸ್. ಎಸ್. ರಾಮಮೂರ್ತಿ ಅವರ ಅಧ್ಯಕ್ಷತೆಯಲ್ಲಿ, ಪ್ರಕಟನ ಶಾಖೆಯ ಸಂಪಾದಕ ವರ್ಗ ಅವರಿಗೆ ಆತ್ಮೀಯ ವಿದಾಯವನ್ನು ತಿಳಿಸುತ್ತ ಸಪ್ತಗಿರೀಶನು ಅವರಿಗೆ ಆಯುರಾರೋಗ್ಯ ಐಶ್ವರ್ಯಗಳನ್ನು ದಯಪಾಲಿಸಲೆಂದು ಪ್ರಾರ್ಥಿಸಿ ಬೀಳುಕೊಟ್ಟಿತು.



# ಕರ್ನಾಟಕದಲ್ಲಿ...

## ತಿ. ತಾ. ಶರ್ಮ ಜನ್ಮಶತಾಬ್ದಿ



ಎಡದಿಂದ - ಸರ್ವಶ್ರೀ ಕೆ. ಪ್ರಹ್ಲಾದರಾವ್, ಕೆ. ಶ್ರೀನಿವಾಸಗೌಡ, ಬಾಬು ಕೃಷ್ಣಮೂರ್ತಿ, ಡಾ|| ಎಚ್, ನರಸಿಂಹಯ್ಯ

ಖ್ಯಾತ ಪತ್ರಕರ್ತ, ಸ್ವತಂತ್ರ ಸತ್ಯಾಗ್ರಹಿ, ಸಂಶೋಧಕ ತಿರುಮಲೆ ತಾತಾಚಾರ್ಯರ ಜನ್ಮ ಶತಾಬ್ದಿಯನ್ನು 1996 ರಲ್ಲಿ ಏಪ್ರಿಲ್ 26 ರಿಂದ ಒಂದು ವರ್ಷಕಾಲ ನಡೆಸಬೇಕೆಂದು ಕೋಲಾರದ ಡಿ.ವಿ.ಜಿ. ಪ್ರತಿಷ್ಠಾನದ ಆಶ್ರಯದಲ್ಲಿ ಸ್ಥಳೀಯ ಎಂ.ಎಲ್.ಎ. ಶ್ರೀ ಕೆ. ಶ್ರೀನಿವಾಸಗೌಡರ ಅಧ್ಯಕ್ಷತೆಯಲ್ಲಿ 19-12-1995 ರಂದು ಕೋಲಾರದ ಶ್ರೀ ಚಿನ್ನಯ್ಯ ರಂಗಮಂದಿರದಲ್ಲಿ ನಡೆದ ಜನ್ಮಶತಾಬ್ದಿಯ ಯೋಜನಾ ಸಭೆಯಲ್ಲಿ ತೀರ್ಮಾನಿಸಲಾಗಿದೆ.

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರೂ ಖ್ಯಾತ ಸ್ವಾತಂತ್ರ್ಯ ಹೋರಾಟಗಾರರೂ, ಗಾಂಧೀವಾದಿಗಳೂ ಆದ ಡಾ|| ಎಚ್. ನರಸಿಂಹಯ್ಯನವರು ತಿ. ತಾ. ಶರ್ಮರ ಬಹುಮುಖ ಪ್ರತಿಭೆಯನ್ನು ಕ್ರಿಯಾಶೀಲತೆಯನ್ನೂ ಆದರ್ಶಪರ ಧೋರಣೆಯನ್ನೂ ನೆನೆಯುತ್ತ ಅವರ ನೆನಪಿನ ಅಗತ್ಯವನ್ನು ಒತ್ತಿ ಹೇಳುತ್ತ ಜನ್ಮ ಶತಾಬ್ದಿಗೆ ಅಂಕುರಾರ್ಪಣೆ ಮಾಡಿದರು. ಮಂಗಳ - ವಾರಪತ್ರಿಕೆಯ ಸಂಪಾದಕರು, ಕರ್ನಾಟಕ ಸಾಹಿತ್ಯ ಅಕಾಡಮಿ ಪ್ರಶಸ್ತಿ ವಿಜೇತ ಶ್ರೀ ಬಾಬು ಕೃಷ್ಣಮೂರ್ತಿಯವರು ಒಂದು ವರ್ಷಕಾಲ ನಡೆಯುವ ಕಾರ್ಯಕ್ರಮಕ್ಕೆ ದಿಕ್ಸೂಚಿಯನ್ನು ನೀಡುತ್ತ ತಿ. ತಾ. ಶರ್ಮರನ್ನು, ಅವರು ಬಾಳಿದ ಮೌಲ್ಯಗಳನ್ನು ಪುನರು ತ್ಥಾಪಿಸುವಲ್ಲಿ ಇಂದಿನ ಸಮಾಜಕ್ಕೆ ಉಂಟಾಗುವ ಪ್ರಯೋಜನಗಳನ್ನು ವಿವರಿಸಿದರು.

ತಮ್ಮ ಜಿಲ್ಲೆಯಲ್ಲಿ ಅಸಮಾನ ಆದರ್ಶವಾದಿಗಳು ಜನ್ಮ ತಳೆದರೆಂಬುದರಲ್ಲಿ, ತಮಗೆ ಹೆಮ್ಮೆಯೆಂದೂ, ಜೀವನದಲ್ಲಿ ಮೇಲ್ಮೆಯನ್ನು ಬಯಸುವವರೆಲ್ಲ ಹೆಮ್ಮೆ ಪಡುವಂತಹ ಹಿರಿಚೇತನಗಳಲ್ಲಿ ಒಂದಾದ ತಿ.ತಾ. ಶರ್ಮರ ಶತಾಬ್ದಿ ಆಚರಣೆಯಿಂದ, ಒಳಿತು ಹರಡುವುದರಲ್ಲಿ ಸಂದೇಹವಿಲ್ಲ. ಹಾಗಾಗಿ ವರ್ಷಪೂರ್ತಿ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಪ್ರಯತ್ನಿಸುವುದಾಗಿ ಅಧ್ಯಕ್ಷಪೀಠದಿಂದ ಶ್ರೀ ಶ್ರೀನಿವಾಸಗೌಡರು ನುಡಿದರು.



ಅತಿಥಿಗಳನ್ನು ಪರಿಚಯ ಮಾಡುತ್ತ ಶ್ರೀ ಪಾರ್ಥಸಾರಥಿ ಅವರು ಅವರುಗಳ ಜೀವನ ಮೌಲ್ಯಗಳು ಹೇಗೆ ತಿ. ತಾ. ಶರ್ಮರು ಬಾಳಿದ ಮೌಲ್ಯಗಳಿಗೆ ಹತ್ತಿರವಾದವು ಎಂಬುದನ್ನು ವಿವರಿಸಿ, ಈ ಮೌಲ್ಯಪ್ರಸಾರದಲ್ಲಿ ಒಂದು ವರ್ಷ ನಡೆಯುವ ಜಿಲ್ಲೆಯ ವಿವಿಧೆಡೆ ಕಾರ್ಯಕ್ರಮಗಳನ್ನೂ, ಪುಸ್ತಕ ಪ್ರಕಟನೆಯನ್ನೂ ಹಮ್ಮಿಕೊಳ್ಳಲಾಗಿದೆ ಎಂದರು. ಸಭಾ ಕಾರ್ಯಕ್ರಮವನ್ನು ಶ್ರೀ ಕೆ. ಆರ್. ನರಸಿಂಹನ್ ಅವರು ನಡೆಸಿಕೊಟ್ಟರು.ಡಿ.ವಿ.ಜಿ. ಪ್ರತಿಷ್ಠಾನದ ಪರವಾಗಿ ಶ್ರೀ ಕೆ. ಪ್ರಹ್ಲಾದರಾವ್ ಅವರು ವಂದಿಸಿದರು.



ಓಳ್ಳಿರಿ ಕೊಂಡು ಓದಿರಿ

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ

## ಫೆಬ್ರವರಿ 1996

ಫೆಬ್ರವರಿ 1996 ರಲ್ಲಿ ಮಹಾಶಿವರಾತ್ರಿ, ತಿರುಪತಿಯಲ್ಲಿ ಹಲವು ಪರ್ವದಿನಗಳು ಕಲಿತು ಬರುತ್ತಿವೆ. ಇದಕ್ಕಾಗಿ ಸಪ್ತಗಿರಿಯನ್ನು ಸರ್ವಾಂಗಸುಂದರವನ್ನಾಗಿ ಮಾಡಲು ಪ್ರಯತ್ನಗಳಾಗುತ್ತಿವೆ. ಫೆಬ್ರವರಿ ತಿಂಗಳ ಸಂಚಿಕೆಯ ಹಲವು ಮುಖ್ಯ ಲೇಖನಗಳೆಂದರೆ-

### ದ್ವಾದಶ ಜ್ಯೋತಿರ್ಲಿಂಗಗಳು :

ಪರಮಶಿವನನ್ನು ಲಿಂಗರೂಪದಲ್ಲಿ ಆರಾಧಿಸುವ ಸಂಪ್ರದಾಯ ಭಾರತೀಯರದ್ದು. ಅವನ ಜ್ಯೋತಿರ್ಲಿಂಗಗಳನ್ನು ಹನ್ನೆರಡು ಕಡೆ ಭಾರತದಲ್ಲಿ ಪ್ರಾಚೀನ ಕಾಲದಿಂದ ಗುರುತಿಸಿ ಪೂಜಿಸುತ್ತ ಬರಲಾಗಿದೆ. ಅವುಗಳ ಒದು ಸಂಕ್ಷಿಪ್ತ ವಿವರಣೆ ನೀಡಿದ್ದಾರೆ ಕುಮಟಾದ ಸುಮಿತ್ರಾ ಶಾನಭಾಗ.

### ದಾಸಸಾಹಿತ್ಯದಲ್ಲಿ ಶ್ರೀನಿವಾಸ :

ಶ್ರೀನಿವಾಸ ಹಲವಾರು ಭಾಷೆಗಳ ಕವಿ ಸಂತರಿಂದ ವ್ಯಾವರ್ಣಿತ, ಕೀರ್ತಿತನಾಗಿ ಸರ್ವರಿಂದಲೂ ಪೂಜೆಗೊಳ್ಳುತ್ತ ನಭೂತೋ ನ ಭವಿಷ್ಯತಿ ಆಗಿರುವ ದೈವ, ಈ ತಿರುಮಲೆಯಪ್ಪನನ್ನು ಕನ್ನಡದ ಹರಿದಾಸರು ಕಂಡರಸಿದ ಬಗೆಯ ವಿವರಣೆ ನೀಡಿದ್ದಾರೆ ಪ್ರಾಚಾರ್ಯ ವಸಂತಕುಷ್ಟಗಿ.

### ಕಾಳಿದಾಸನ ಕಾವ್ಯಗಳಲ್ಲಿ ರಾಷ್ಟ್ರೀಯ ಏಕತೆ :

ಸನಾತನ ಧರ್ಮದ ಭಾರತ ಸಾಂಸ್ಕೃತಿಕವಾಗಿ ಏಕವಾದದ್ದು ಎಂಬುದನ್ನು ಕವಿಗಳು ಅದರಲ್ಲೂ ಕವಿಕುಲಗುರು ಕಾಳಿದಾಸ ಆ ಕಾಲದಲ್ಲಿಯೇ ಕಂಡು ಖಚಿತಗೊಳಿಸಿಕೊಂಡಿದ್ದ. ಈ ರಾಷ್ಟ್ರೀಯ ಏಕತೆಯ ಪರಿಯನ್ನು ವಿವರಿಸಿದ್ದಾರೆ ಸಂಸ್ಕೃತದ ಪಂಡಿತ ಪ್ರಾಚಾರ್ಯ ಎಚ್. ವಿ. ನರಸಿಂಹಮೂರ್ತಿ.

### ಪ್ರಸ್ಥಾನ ತ್ರಯ :

ಸನಾತನ ಧರ್ಮದ ಆಧಾರ ಪ್ರಸ್ಥಾನ ತ್ರಯ. ಇವುಗಳ ಸಂಕ್ಷಿಪ್ತ ವಿವರಣೆ, ವಿಶ್ಲೇಷಣೆ ಪಂಡಿತ ರಘುಸುತ ಅವರಿಂದ.

### ನಮ್ಮ ಹಬ್ಬಗಳು :

ಹಬ್ಬಗಳು ವರ್ಷದಲ್ಲಿನ ಪ್ರತಿದಿನವೂ ಆಚರಿಸುವಂತಹವುಗಳು ಭಾರತೀಯರಲ್ಲಿ. ಇವುಗಳ ಆಂತರ್ಯ, ಸ್ಥೂಲ ಸೂಕ್ಷ್ಮಗಳನ್ನು ವಿವರಿಸಿದ್ದಾರೆ ಪ್ರಾಚಾರ್ಯ ಸಿ. ಗೋವಿಂದಾಚಾರ್ಯ.

### ಸಿರಿನೋಂಪಿ -3 :

ಡಿಸೆಂಬರ್ - 95 ರಲ್ಲಿ ಆರಂಭವಾಗಿ ಜನವರಿ 96 ರಲ್ಲಿ ಮುಂದುವರೆದ ಗೋದಾದೇವಿಯ ಮೂವತ್ತು ಪಾಶುರಗಳ ಕನ್ನಡಾನುವಾದದ ಕಡಬ ದೊರೆಸ್ವಾಮಿ ಅಯ್ಯಂಗಾರ್ಯರ ಸಿರಿನೋಂಪಿಯ ಮೂರನೆಯ ಹತ್ತು ಪಾಶುರಗಳು.

ಜೊತೆಗೇ ಮತ್ತೂ ಹಲವಾರು ಸಾಮಯಿಕ ಲೇಖನಗಳು ಸೇರಿ ಪ್ರಕಟವಾಗುವ ಸಪ್ತಗಿರಿಯನ್ನು ಬರಮಾಡಿಕೊಳ್ಳಿ ತಮ್ಮ ಮನೆಗೆ - ಮನಕ್ಕೆ

ಸಪ್ತಗಿರಿಯ ವಾರ್ಷಿಕ ಚಂದಾ ಏಪ್ರಿಲ್ 1996 ರಿಂದ ರೂ 48/- ಮಾತ್ರ. ಎಂ.ಓ. / ಡಿ.ಡಿ. ಗಳನ್ನು ಕಳುಹಿಸಬೇಕಾದ ವಿಳಾಸ - ಸಂಪಾದಕರು ಸಪ್ತಗಿರಿ, ತಿ.ತಿ.ದೇ. ತಿರುಪತಿ - 517 507

ಓದಿರಿ ಓದಿಸಿರಿ

# ತಿಂಗಳಿನ ಮುಖ್ಯದಿನಗಳು

## ಫೆಬ್ರವರಿ --- 1996

4 ಭಾನುವಾರ :
.ತಿರುಪತಿ ಶ್ರೀ ಗೋವಿಂದರಾಜಸ್ವಾಮಿ .ತೆಪ್ಪೋತ್ಸವ ಸಮಾಪ್ತಿ.

6 ಮಂಗಳವಾರ :
ತಿರುಮಳಿಶೈ ಆಳ್ವಾರ್ ವರ್ಷ ತಿರುನಕ್ಷತ್ರ

9 ಶುಕ್ರವಾರ :
ಕೂರತ್ತಾಳ್ವಾರ್ ವರ್ಷ ತಿರುನಕ್ಷತ್ರ
ಶ್ರೀನಿವಾಸ ಮಂಗಾಪುರದಲ್ಲಿ
ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ
ಬ್ರಹ್ಮೋತ್ಸವದಲ್ಲಿ ಧ್ವಜಾರೋಹಣ.

13 ಮಂಗಳವಾರ :
ಶ್ರೀನಿವಾಸ ಗಾಪುರದಲ್ಲಿ
ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ
ಬ್ರಹ್ಮೋತ್ಸವದಲ್ಲಿ ಗರುಡೋತ್ಸವ

16 ಶನಿವಾರ :
ಶ್ರೀನಿವಾಸ ಮಂಗಾಪುರದಲ್ಲಿ
ರಥೋತ್ಸವ.
ಕಪಿಲತೀರ್ಥದಲ್ಲಿ
ಶ್ರೀ ಕಪಿಲೇಶ್ವರಸ್ವಾಮಿ
ಬ್ರಹ್ಮೋತ್ಸವದಲ್ಲಿ ಧ್ವಜಾರೋಹಣ.

17 ಶನಿವಾರ :
ಮಹಾಶಿವರಾತ್ರಿ.
ಕಪಿಲತೀರ್ಥದಲ್ಲಿ ನಂದಿವಾಹನೋತ್ಸವ.
ಶ್ರೀನಿವಾಸ ಮಂಗಾಪುರದಲ್ಲಿ
ಬ್ರಹ್ಮೋತ್ಸವದ ಧ್ವಜಾವರೋಹಣ.

18 ಭಾನುವಾರ :
ಕಪಿಲತೀರ್ಥದಲ್ಲಿ
ಕಲ್ಯಾಣೋತ್ಸವ.

19 ಸೋಮವಾರ :
ಕಪಿಲತೀರ್ಥದಲ್ಲಿ
ಉಯ್ಯಾಲೆ ಸೇವೆ.
ತಿರುಕಚ್ಚಿನಂಬಿ ಉತ್ಸವ ಪ್ರಾರಂಭ.

28 ಬುಧವಾರ :
ತಿರುಕಚ್ಚಿನಂಬಿ ಶಾತ್ತುಮೊರೆ.

Published on behalf of T. T. Devasthanams by N. S. Ramamurthy, M.A., Editor and
Printed at T.T.D. Press by P. Mohan Rao, Manager, T.T.D. Press, Tirupati - 517 507

